॥ ಓಂ ॥

ಶ್ರೀ ಶ್ರೀಧರ ಜನ್ಮಶತಮಾನೋತ್ಸವ ಗ್ರಂಥಮಾಲೆ

ದ್ವಿತೀಯ ಪುಷ್ಪ

# ವರದಪುರದ ವರದಯೋಗಿ

## ಭಗವಾನ್ ಸದ್ಗುರು ಶ್ರೀ ಶ್ರೀಧರಸ್ವಾಮಿಗಳ ಜೀವನ ಚರಿತ್ರೆ




ಲೇಖಕರು :

ಮಹಾಮಹೋಪಾಧ್ಯಾಯ

ವಿದ್ವಾನ್ ಎನ್. ರಂಗನಾಥ ಶರ್ಮಾ

ಶ್ರೀ ಶ್ರೀಧರಸೇವಾ ಮಹಾ ಮಂಡಲ (ರಿ.)

ಶ್ರೀ ಶ್ರೀಧರಾಶ್ರಮ, ಶ್ರೀಕ್ಷೇತ್ರ ವರದಪುರ

|| ಓಂ ||

ಶ್ರೀ ಶ್ರೀಧರ ಜನ್ಮಶತಮಾನೋತ್ಸವ ಗ್ರಂಥಮಾಲೆ
ದ್ವಿತೀಯ ಪುಷ್ಪ

# ವರದಪುರದ ವರದಯೋಗಿ

## ಭಗವಾನ್ ಸದ್ಗುರು ಶ್ರೀ ಶ್ರೀಧರಸ್ವಾಮಿಗಳ ಜೀವನ ಚರಿತ್ರೆ



ಲೇಖಕರು :
ಮಹಾಮಹೋಪಾಧ್ಯಾಯ
ವಿದ್ವಾನ್ ಎನ್. ರಂಗನಾಥ ಶರ್ಮಾ

ಶ್ರೀ ಶ್ರೀಧರಸೇವಾ ಮಹಾ ಮಂಡಲ (ರಿ)
ಶ್ರೀ ಶ್ರೀಧರಾಶ್ರಮ, ಶ್ರೀಕ್ಷೇತ್ರ ವರದಪುರ
ಯಡಜಿಗಳೇಮನೆ ಅಂಚೆ, ಸಾಗರ ತಾಲ್ಲೂಕು,
ಶಿವಮೊಗ್ಗ ಜಿಲ್ಲೆ, ಕರ್ನಾಟಕ–577 401
ದೂರವಾಣಿ : 08183–236166/236011

# ವರದಪುರದ ವರದಯೋಗಿ

ಭಗವಾನ್ ಸದ್ಗುರು ಶ್ರೀ ಶ್ರೀಧರಸ್ವಾಮಿಗಳ ಜೀವನ ಚರಿತ್ರೆ

ಲೇಖಕರು : ಮಹಾಮಹೋಪಾಧ್ಯಾಯ
ವಿದ್ವಾನ್ ಎನ್. ರಂಗನಾಥ ಶರ್ಮಾ

ಪುಟಗಳು : vi + 56

ಪ್ರಕಾಶಕರು : ಶ್ರೀ ಶ್ರೀಧರಸೇವಾ ಮಹಾ ಮಂಡಲ (ರಿ)
ಶ್ರೀ ಶ್ರೀಧರಾಶ್ರಮ, ಶ್ರೀಕ್ಷೇತ್ರ ವರದಪುರ

ಮೊದಲನೆಯ ಮುದ್ರಣ : ವ್ಯಯನಾಮ ಸಂವತ್ಸರ, ಚೈತ್ರಮಾಸ
ಏಪ್ರಿಲ್-2006 ; ಪ್ರತಿಗಳು : 2000

ಮುದ್ರಕರು : ಸದ್ಗುರು ಸ್ಕ್ರೀನ್ಸ್ , ರಾಜಾಜಿನಗರ,
ಬೆಂಗಳೂರು.

ಎರಡನೆಯ ಮುದ್ರಣ : ಸರ್ವಧಾರೀನಾಮ ಸಂವತ್ಸರ,
ಮಾರ್ಗಶೀರ್ಷ ಶುಕ್ಲ ಸಪ್ತಮೀ
05.12.2008 ; ಪ್ರತಿಗಳು : 5000

ಮುದ್ರಕರು : ಶ್ರೀ ಪ್ರಸಿದ್ಧಿ ಟೆಕ್
ನಂ. 863, ಡಾ॥ ಎಂ.ಸಿ. ಮೋದಿ ರಸ್ತೆ,
2ನೇ ಹಂತ, ರಾಜಾಜಿನಗರ,
ಬೆಂಗಳೂರು - 560 086.

ಮೂಲ್ಯ : ರೂ. 25/-

# ಪ್ರಸ್ತಾವನೆ

ಲೋಕದಲ್ಲಿ ಸಮರ್ಥರಾದ ವಿದ್ವಾಂಸರಿದ್ದಾರೆ, ರಾಜಕಾರಣಿಗಳಿದ್ದಾರೆ, ವೀರಯೋಧರಿದ್ದಾರೆ, ವಾಣಿಜ್ಯವೇ ಮೊದಲಾದ ವಿವಿಧ ಉದ್ಯಮಗಳಲ್ಲಿ ದಕ್ಷರಾದ ಉದ್ಯಮಿಗಳೂ, ಕೃಷಿಕರೂ, ಕಾರ್ಮಿಕರೂ ಇದ್ದಾರೆ. ಎಲ್ಲರೂ ಅರ್ಥಕಾಮಗಳ ಬೆನ್ನು ಹತ್ತಿದವರೇ. ಅರ್ಥಕಾಮಗಳು ಲೋಕ ವ್ಯವಹಾರಕ್ಕೆ ಅವಶ್ಯಕವಾದವುಗಳೇ ಹೌದು. ಮನುಷ್ಯನ ಸಹಜ ಪ್ರವೃತ್ತಿಯೇ ಅವುಗಳಿಗಾಗಿರುವುದರಿಂದ ಅವು ಪುರುಷಾರ್ಥಗಳೆಂದು ನಮ್ಮ ಪ್ರಾಚೀನ ಋಷಿಗಳೂ ಧರ್ಮಶಾಸ್ತ್ರಜ್ಞರೂ ಹೇಳಿಯೇ ಇದ್ದಾರೆ. ಪುರುಷಾರ್ಥಗಳೆಂದರೆ ಮನುಷ್ಯರ ಜೀವನದ ಗುರಿಗಳೆಂದರ್ಥ. ಇಲ್ಲಿ ಅರ್ಥಕಾಮವೆಂದರೆ ಇಂದ್ರಿಯಗಳು ಬಯಸುವ ವಿವಿಧ ಸುಖ ಭೋಗ. ಅರ್ಥಕಾಮಗಳ ಬಯಕೆ ಸಹಜವಾಗಿ ಜನರಲ್ಲಿ ಮೂಡುವುದರಿಂದ ಅದನ್ನು ಸಂಪಾದಿಸಿ ಸುಖಿಸಬೇಕೆಂಬುದು ಇಲ್ಲಿರುವ ವಿಧಿ.

**“ಯತೋಽಭ್ಯುದಯನಿಃಶ್ರೇಯಸಸಿದ್ಧಿಃಸಧರ್ಮಃ”** ಎಂದು ಪ್ರಾಚೀನರು ಹೇಳಿದ್ದಾರೆ. ಅಭ್ಯುದಯವೆಂದರೆ ಅರ್ಥಕಾಮಗಳು, ನಿಃಶ್ರೇಯಸವೆಂದರೆ ಮೋಕ್ಷ, ಯಾವುದಕ್ಕಿಂತ ಅಧಿಕವಾದ ಶ್ರೇಯಸ್ಸು ಇಲ್ಲವೋ ಅದು ನಿಃಶ್ರೇಯಸ್ಸು.

ಅರ್ಥಕಾಮಗಳು ಅಧರ್ಮದಿಂದಲೂ ಪ್ರಾಪ್ತವಾಗಬಹುದು. ಆದ್ದರಿಂದ **“ಧರ್ಮಪೂರ್ವಕವಾಗಿಯೇ ಧನವನ್ನು ಸಂಪಾದಿಸು, ಧರ್ಮಶಾಸ್ತ್ರದ ವಿಧಿಯಂತೆ ಸುಖವನ್ನು ಭೋಗಿಸು”** ಎಂದು ಶಾಸ್ತ್ರವು ವಿಧಿಸುತ್ತದೆ. ಮೋಕ್ಷವಾದರೋ ಧರ್ಮಮಾರ್ಗದಿಂದಲೇ ಸಾಧ್ಯ, ಅಧರ್ಮಿಗೆ ಅದು ಲಭ್ಯವಾಗುವುದೇ ಇಲ್ಲ ಎಂದು ಇದು ಸ್ಪಷ್ಟಗೊಳಿಸುತ್ತದೆ.

ಧರ್ಮಾರ್ಥಕಾಮುಗಳಿಗೆ ತ್ರಿವರ್ಗಗಳೆಂದು ಹೆಸರು. ಈ ತ್ರಿವರ್ಗಗಳಲ್ಲಿ ನಿರತರಾದವರಿಗೆ ಸಂಸಾರವೂ, ಹುಟ್ಟು ಸಾವುಗಳೂ ತಪ್ಪುವುದಿಲ್ಲ. ಧರ್ಮಮಾರ್ಗದಲ್ಲಿಯೇ ನಡೆದು ದುಃಖದಿಂದ ತಪ್ಪಿಸಿಕೊಳ್ಳುತ್ತೇನೆಂಬುದು ಎಂದಿಗೂ ಶಕ್ಯವಾದದ್ದಲ್ಲ. ನಳ, ಹರಿಶ್ಚಂದ್ರ, ಧರ್ಮರಾಯರ ಪಾಡು ಏನಾಯಿತೆಂಬುದು ನಮ್ಮ ಕಣ್ಣ ಮುಂದಿದೆ. ಈ ಸಂಸಾರ ಬಂಧನದಿಂದ ಪಾರಾಗಲು ಮೋಕ್ಷ ಮಾರ್ಗ ಒಂದೇ ಗತಿ.

**ಮಹತಾ ಪುಣ್ಯ ಪಣ್ಯೇನ ಕ್ರೀತೇಯಂ ಕಾಯನೌಸ್ತ್ವಯಾ ।**
**ಸಂಸಾರಾಂಭೋನಿಧಂತರ್ತುಂತರ ಯಾವನ್ನ ಭಿದ್ಯತೇ ॥**

"ಎಲೈ ಮಾನವ, ಮಹತ್ತರವಾದ ಪುಣ್ಯವೆಂಬ ಬೆಲೆಯನ್ನು ಕೊಟ್ಟು ಈ ಮನುಷ್ಯ ಶರೀರವೆಂಬ ಹಡಗನ್ನು ಕೊಂಡಿದ್ದೀಯೆ. ಈ ದೇಹವೆಂಬ ಹಡಗು ಸಂಸಾರ ಸಮುದ್ರವನ್ನು ದಾಟುವುದಕ್ಕಾಗಿ ಬಂದಿದೆ. ಈ ಹಡಗು ಒಡೆದು ಹೋಗುವುದರೊಳಗೆ ಈ ಸಂಸಾರ ಸಾಗರವನ್ನು ದಾಟಿಬಿಡು!" ಎಂದು ಒಬ್ಬ ನೀತಿಶಾಸ್ತ್ರಕಾರನು ಹೇಳಿದ ಹಿತವಚನ.

ಪ್ರಾಣಿಗಳಲ್ಲಿ ಮನುಷ್ಯ ಜನ್ಮ ದೊಡ್ಡದು. ಇದು ಉಚಿತವಾಗಿ ಬಂದದ್ದಲ್ಲ. ವಿಪುಲವಾದ ಪುಣ್ಯರಾಶಿಯನ್ನು ಕೊಟ್ಟು ಸಂಪಾದಿಸಿಕೊಂಡದ್ದು. ಈ ಜನ್ಮವು ಸಾರ್ಥಕವಾಗಬೇಕಾದರೆ, ಮೋಕ್ಷಮಾರ್ಗವನ್ನು ಹಿಡಿದು ಮುಂದೆ ಸಾಗಬೇಕು. ಈ ಮಾರ್ಗವನ್ನು ಹಿಡಿದು ಸಾಗಬೇಕೆಂಬ ಬುದ್ಧಿಯೂ ಸಹ ಜನ್ಮಾಂತರದ ಪುಣ್ಯದಿಂದಲೇ ಲಭಿಸತಕ್ಕದ್ದು. ಎಲ್ಲರಿಗೂ ಇದರಲ್ಲಿ ಆಸಕ್ತಿ ಹುಟ್ಟುವುದಿಲ್ಲ. **"ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ"** ಎಂದು ಶ್ರೀ ಕೃಷ್ಣನೇ ಭಗವದ್ಗೀತೆಯಲ್ಲಿ ಹೇಳಿದ್ದಾನಲ್ಲವೆ? ಅಷ್ಟೇ ಅಲ್ಲ. **"ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂವೇತ್ತಿ ತತ್ತ್ವತಃ"**. "ಈ ಮಾರ್ಗದಲ್ಲಿ ಹೋಗಿ ಯತ್ನಿಸತಕ್ಕ ಯೋಗಿಗಳಲ್ಲಿಯೂ ಯಾವನೋ ಒಬ್ಬನೇ ನನ್ನನ್ನು ಯಥಾರ್ಥವಾಗಿ ತಿಳಿಯುತ್ತಾನೆ" ಎಂದೂ ಸಹ ಆತನೇ ಹೇಳಿದ್ದಾನೆ.

"ಬ್ರಹ್ಮವಿದ್ ಬ್ರಹ್ಮೈವ ಭವತಿ" ಎಂದು ಶ್ರುತಿಯು ಸಾರುತ್ತದೆ. ಯಾವಾತನು ಬ್ರಹ್ಮವನ್ನು ಯಥಾರ್ಥವಾಗಿ ತಿಳಿಯುತ್ತಾನೋ ಆತನು ಬ್ರಹ್ಮವೇ ಆಗಿಬಿಡುತ್ತಾನೆ" ಎಂದರ್ಥ. ಈ ಸ್ಥಿತಿಯೇ ಮೋಕ್ಷ.

ಈ ರೀತಿ ಸನ್ಮಾರ್ಗವನ್ನು ತುಳಿದು ಸಜ್ಜನರಿಗೆ ಸನ್ಮಾರ್ಗವನ್ನು ಬೋಧಿಸಿ, ಸ್ವಯಂ ಸದ್ರೂಪದ ನೆಲೆಯಲ್ಲಿ ಮುಕ್ತರಾದುದಕ್ಕೆ ಶ್ರೀವರದಪುರದ ಪೂಜ್ಯ ಶ್ರೀಧರಸ್ವಾಮಿಗಳೇ ಉದಾಹರಣೆ. ಇವರ ಮಾತಾ ಪಿತೃಗಳು ಆರ್ಥಿಕ ದೃಷ್ಟಿಯಲ್ಲಿ ಅತ್ಯಂತ ಬಡವರಾದರೂ ಸದಾಚಾರ ಸಂಪತ್ತು, ಗುಣ ಸಂಪತ್ತುಗಳಿಂದ ಶ್ರೀಮಂತರೇ ಆಗಿದ್ದರು. ಈ ಶ್ರೀಮಂತರೂ ಬಾಲಕ ಶ್ರೀಧರನಿಗೆ ಬಹಳ ಕಾಲ ಉಳಿಯಲಿಲ್ಲ. ಈತನಿಗೆ ಹನ್ನೆರಡು ವರ್ಷಗಳಾದಾಗ ತಾಯಿಯಿಲ್ಲ, ತಂದೆಯಿಲ್ಲ, ಅಣ್ಣನಿಲ್ಲ, ಅಕ್ಕನಿಲ್ಲ, ಆತನನ್ನು ಸಾಕುತ್ತಿದ್ದ ದೊಡ್ಡಪ್ಪನೂ ಉಳಿಯಲಿಲ್ಲ. ಮನೆಯಲ್ಲಿದ್ದ ಸಾಮಾನುಗಳನ್ನು ಕಳ್ಳರು ಕದ್ದೊಯ್ದರು! ಶ್ರೀಧರನಿಗೆ ಇನ್ನೇನುಳಿಯಿತು?

"ದಿಗಂಬರಾ ದಿಗಂಬರಾ ಶ್ರೀಪಾದವಲ್ಲಭ ದಿಗಂಬರಾ!"

ಶ್ರೀಕೃಷ್ಣನು ಒಂದೆಡೆಯಲ್ಲಿ ಹೇಳಿದ್ದಾನೆ – **"ಯಸ್ಯಾನುಗ್ರಹಮಿಚ್ಛಾಮಿ ತಸ್ಯವಿತ್ತಂ ಹರಾಮ್ಯಹಂ- ಯಾವಾತನಿಗೆ ನನ್ನ ಅನುಗ್ರಹದ ಪ್ರಯೋಜನ ದೊರೆಯಲೆಂದು ನಾನು ಬಯಸುತ್ತೇನೆಯೋ, ಆತನ ಐಶ್ವರ್ಯವನ್ನು ಮೊದಲು ಕಿತ್ತುಕೊಳ್ಳುತ್ತೇನೆ"** ಎಂದು. ಭಗವಂತನಲ್ಲಿ ಭಕ್ತಿ, ಗುರೂಪದೇಶದಲ್ಲಿ ಅನುರಕ್ತಿ, ವಿಷಯ ಭೋಗದಲ್ಲಿ ವಿರಕ್ತಿ – ಈ ಮೂರು ಗುಣ ಸಂಪತ್ತುಗಳು ಶ್ರೀಧರಸ್ವಾಮಿಗಳಿಗೆ ಬಾಲ್ಯದಲ್ಲಿಯೇ ಪ್ರಾಪ್ತವಾದವು. ಈ ಪ್ರಾಪ್ತಿಯು ಜನ್ಮಾಂತರದ ಪುಣ್ಯಫಲವೇ ಸರಿ. ಶ್ರೀಧರರು ವಿವಿಧ ಸಾಧನೆಗಳ ಅನುಷ್ಠಾನದಿಂದ ಮೋಕ್ಷ ಶ್ರೀಧರರೇ ಆದರು. **"ಋಚಃ ಸಾಮಾನಿ ಯಜೂಗುಂ। ಸಾ ಹಿ ಶ್ರೀರಮೃತಾಸತಾಂ"** ಎಂದು ವೇದವು ಘೋಷಿಸಿದೆ. ಋಗ್ವೇದ, ಯಜುರ್ವೇದ, ಸಾಮವೇದವೆಂಬ ವೇದತ್ರಯವು ಸತ್ಪುರುಷರ ಶ್ರೀ ಆಗಿದೆ. ವೇದ ಪ್ರತಿಪಾದ್ಯವಾದ ಮೋಕ್ಷಶ್ರೀ ಅವರಿಗೆ ದೊರೆಯುತ್ತದೆ ಎಂದು ತಾತ್ಪರ್ಯ.

ಒಟ್ಟಿನಲ್ಲಿ ವಿತ್ತದ 'ತ' ಎಂಬ ಅಂಹಕಾರವು ತೊಲಗಿದವನು ವಿತ್ = ಜ್ಞಾನಿಯಾಗುತ್ತಾನೆ. ಚಿತ್ತಾದ 'ತ' ಎಂಬ ವಿಷಯಾಸಕ್ತಿಯು ತೊಲಗಿದವನು, ಚಿತ್ = ಚೈತನ್ಯ ಸ್ವರೂಪನಾಗುತ್ತಾನೆ. ಇವನೇ ಚಿದಂಬರ.

ಪರಮ ವಿರಕ್ತರೂ ಆತ್ಮ ಜ್ಞಾನಿಗಳೂ ಧರ್ಮಧ್ವಜಸ್ಥಾಪಕರೂ ಆದ ಪರಮಪೂಜ್ಯ ಶ್ರೀಧರಸ್ವಾಮಿಗಳು ವದ್ದೂರಿನಲ್ಲಿ ನೆಲೆಸಿ ಅದನ್ನು ವರದಪುರವನ್ನಾಗಿ ಮಾಡಿದರು. ಭಕ್ತ ಜನರಿಗೆ ವರದ ಪುರುಷರಾದರು.

ಈ ಮಹಾಮಹಿಮರ ಜೀವನಚರಿತೆಯನ್ನು ಬರೆಯುವ ಸೇವೆ ನನಗೆ ಲಭ್ಯವಾದದ್ದು ನನ್ನ ಭಾಗ್ಯ. ಶ್ರೀ ಶ್ರೀಧರ ಸೇವಾ ಮಹಾಮಂಡಲದ ಕೋರಿಕೆಯಂತೆ ಶ್ರೀಸ್ವಾಮಿಗಳ ಜೀವನ ಚಿತ್ರವನ್ನು ಸಂಕ್ಷೇಪವಾಗಿ ನಿರೂಪಿಸಿದ್ದೇನೆ. ಇದರೊಡನೆ ನಾನು ರಚಿಸಿದ ಶ್ರೀ ಶ್ರೀಧರ ಸ್ವಾಮಿಗಳ ಸ್ತುತಿ ಪುಷ್ಪ ಮಾಲಿಕೆಯು ಪ್ರಕಟವಾಗಿದೆ.

ಈ ಪುಸ್ತಕವನ್ನು ಬರೆಯುವ ಕಾರ್ಯದಲ್ಲಿ ನನಗೆ ತುಂಬಾ ಸಹಾಯ ಮಾಡಿದ ವಿದ್ವಾನ್ ಶ್ರೀ ರಾಮಚಂದ್ರ ಶರ್ಮಾ ತ್ಯಾಗಲಿ ಇವರ ಉಪಕಾರವು ಸ್ಮರಣೀಯವಾದದ್ದು. ಅಂತೆಯೇ ನನ್ನನ್ನು ಈ ಕಾರ್ಯದಲ್ಲಿ ಪ್ರೋತ್ಸಾಹಿಸಿದ ಶ್ರೀ ಮಹದೇವ ಜೋಯಿಸ ಅವರ ಶ್ರದ್ಧಾಭಕ್ತಿಗಳೂ ಪ್ರಶಂಸನೀಯವಾದವು. ವರದಹಳ್ಳಿಯ ವರದ ಪುರುಷರ ಅನುಗ್ರಹವು ಸರ್ವರನ್ನು ಧರ್ಮಮಾರ್ಗದಲ್ಲಿ ನಡೆಸಲೆಂದು ಪ್ರಾರ್ಥಿಸುತ್ತೇನೆ.

ಬೆಂಗಳೂರು
05-01-2006

ಮಹಾಮಹೋಪಾಧ್ಯಾಯ
–ವಿದ್ವಾನ್ ಎನ್. ರಂಗನಾಥ ಶರ್ಮಾ

**॥ ಶುಭಮಸ್ತು ॥**

# ನಿವೇದನೆ

ಈ ಪುಸ್ತಕವು ಇಷ್ಟುಬೇಗನೇ ದ್ವಿತೀಯ ಮುದ್ರಣವನ್ನು ಕಾಣುತ್ತಿರುವುದು ಪರಮಪೂಜ್ಯರಾದ ಶ್ರೀಧರಸ್ವಾಮಿಗಳ ಮಹಿಮೆಯಿಂದಲೇ ಸರಿ. ಈ ಕೃತಿಯಲ್ಲಿ ಶ್ರೀಶ್ರೀಧರಸ್ವಾಮಿಗಳ ಮಹತ್ತರ ತಪೋವಿಧಾನಗಳ, ಧರ್ಮೋಪದೇಶಗಳ ವಿವರಣೆ ಇಲ್ಲ. ಮರಾಠಿ ಭಾಷೆಯಲ್ಲಿ ಮತ್ತು ಸಂಸ್ಕೃತ ಭಾಷೆಯಲ್ಲಿ ಅವರು ರಚಿಸಿದ ನಾನಾಸ್ತೋತ್ರಗಳ ಪರಾಮರ್ಶೆಯೂ ಇಲ್ಲ. ಅವರ ದಿವ್ಯ ಚರಿತೆಯನ್ನು ವಿಸ್ತಾರವಾಗಿ ತಿಳಿಯಲಿಚ್ಛಿಸುವ ಭಕ್ತಜನರ ಕುತೂಹಲದ ಶಾಂತಿಗಾಗಿ ಬರೆದ ಒಂದು ಪೂರ್ವಪೀಠಿಕೆ ಈ ಕೃತಿ.

ಬಾಲ್ಯದಲ್ಲಿಯೇ ತಂದೆತಾಯಿಗಳನ್ನು ಕಳೆದುಕೊಂಡ ಅನಾಥನಾದ ಒಬ್ಬ ಬಾಲಕನು ತನ್ನ ಧೀರತೆಯಿಂದ, ಕಷ್ಟಸಹಿಷ್ಣುತೆಯಿಂದ, ಧರ್ಮಪ್ರಿಯತೆಯಿಂದ, ಚಿತ್ತಸ್ಥೈರ್ಯದಿಂದ, ಸತ್ಯನಿಷ್ಠೆಯಿಂದ–ಏನನ್ನು ಸಾಧಿಸಬಹುದು–ಎಷ್ಟು ಎತ್ತರಕ್ಕೆ ಏರಬಹುದು–ಅನ್ಯರಿಗೆ ಮಾರ್ಗದರ್ಶನ ಮಾಡಬಹುದು–ಎಂಬುದಕ್ಕೆ ಶ್ರೀಧರಸ್ವಾಮಿಗಳೇ ಒಂದು ಪ್ರಬಲವಾದ ನಿದರ್ಶನವಾಗಿದ್ದಾರೆ. ಈ ನಿದರ್ಶನವನ್ನು ನಮ್ಮ ಯುವಕ ಯುವತಿಯರಿಗೆ ತೋರಿಸಿ, ಭಕ್ತಜನರ ದೈವಭಕ್ತಿ, ಗುರುಭಕ್ತಿ, ಧರ್ಮಶ್ರದ್ಧೆ ಸದಾಚಾರ, ಸತ್ಯನಿಷ್ಠೆಗಳನ್ನು ಪ್ರಚೋದಿಸುವುದು ಈ ಪುಸ್ತಕದಲುದ್ದೇಶವಾಗಿರುತ್ತದೆ.

ಭಕ್ತಜನರಿಗೆ ಉಪಯೋಗವಾಗಲೆಂದು ನಾನು ರಚಿಸಿದ ಶ್ರೀಧರ ಸ್ತುತಿ ಪುಷ್ಪಮಾಲೆಯನ್ನು ಈ ಪುಸ್ತಕದಲ್ಲಿ ಪ್ರಕಟಿಸಲಾಗಿದೆ. ಪರಮಪೂಜ್ಯ ಶ್ರೀಧರಸ್ವಾಮಿಗಳು ವರದಹಳ್ಳಿಯಲ್ಲಿ ಸ್ಥಾಪಿಸಿರುವ ಧರ್ಮಧ್ವಜವು ಶಾಶ್ವತವಾಗಿ ಬೆಳಗುತ್ತಿರಲಿ.

ಬೆಂಗಳೂರು ವಿದ್ವಾನ್ ಎಸ್. ರಂಗನಾಥ ಶರ್ಮಾ

ತಾ 28–11–2008

# ಅರಿಕೆ

**'ತಪಸ್ಸು, ಸಾಧನೆ ಮಾಡಿದರೆ ಮಾನವ ದೇವ ನಾಗಬಲ್ಲ; ನರನು ನಾರಾಯಣನಾಗಬಲ್ಲ'** ಎಂಬ ಪರಮ ತತ್ವವನ್ನು ಶ್ರೀ ಶ್ರೀಧರಸ್ವಾಮಿಗಳು ಎತ್ತಿ ತೋರಿಸಿದ್ದಾರೆ. **'ಭಕ್ತರಾಗಿ ಒಮ್ಮೆ ನನ್ನ ಬಳಿ ಬಂದರೂ ಸಾಕು, ಅವರಿಗೆ ಮೋಕ್ಷ ಕೊಡುತ್ತೇನೆ'** ಎಂಬ ಅಭಯ ವಚನದ ದಿವ್ಯಅನುಭವವು ಅವರನ್ನು ಪ್ರತ್ಯಕ್ಷವಾಗಿ ಕಾಣದ ಭಕ್ತರಿಗೂ ಸಹ ಇಂದಿಗೂ ಅರಿವಾಗುತ್ತಿದೆ.

ಈ ಮಹಾಮಹಿಮರ ಜೀವನ ಚರಿತ್ರೆಯನ್ನು ಸಂಕ್ಷೇಪವಾಗಿ ಮತ್ತು ಹೃದಯಂಗಮವಾಗಿ ಬರೆದುಕೊಟ್ಟು ಉಪಕರಿಸಿದ ಮಹಾಮಹೋಪಾಧ್ಯಾಯ ವಿದ್ವಾನ್ ಎನ್. ರಂಗನಾಥ ಶರ್ಮಾರವರಿಗೆ ನಮ್ಮ ಕೃತಜ್ಞತಾಪೂರ್ವಕ ನಮಸ್ಕಾರಗಳು ಸಲ್ಲುತ್ತವೆ. ಈ ಮಹನೀಯರಿಗೆ ಈ ಕೃತಿಯನ್ನು ರಚಿಸಲು ಸಹಾಯ ಮಾಡಿದ ವಿದ್ವಾನ್ ರಾಮಚಂದ್ರಶರ್ಮಾ ತ್ಯಾಗಲಿಯವರಿಗೂ, ಈಕೃತಿಯ ಪ್ರಕಟಣೆಗೆ ಪ್ರೋತ್ಸಾಹವಿತ್ತ ಶ್ರೀ ಮಹಾದೇವ ಜೋಯಿಸರಿಗೂ, ಪ್ರಥಮ ಆವೃತ್ತಿಯನ್ನು ಅಂದವಾಗಿ ಮುದ್ರಿಸಿ ಕೊಟ್ಟಿದ್ದ ಶ್ರೀ ಸದ್ಗುರು ಸ್ಕ್ರಿನ್ಸ್, ಬೆಂಗಳೂರು ಅವರಿಗೂ ನಮ್ಮ ನಮನಗಳು.

ಶ್ರೀ ಶ್ರೀಧರ ಜನ್ಮ ಶತಮಾನೋತ್ಸವ ಗ್ರಂಥಮಾಲೆಯ ದ್ವಿತೀಯ ಪುಷ್ಪವಾಗಿ ಪ್ರಕಟವಾದ ಈ ಕೃತಿಯು ಬಹುಬೇಗನೇ ಮರುಮುದ್ರಣ ಪಡೆಯುತ್ತಿರುವುದು ಅತ್ಯಂತ ಸಂತಸದ ವಿಷಯ. ಈ ದ್ವಿತೀಯ ಮುದ್ರಣಕ್ಕೆ "ನಿವೇದನೆ" ಯನ್ನು ಭಕ್ತಿ ಹಾಗೂ ಅದಮ್ಯಉತ್ಸಾಹದಿಂದ ಬರೆದುಕೊಟ್ಟು ಉಪಕರಿಸಿದ ಈ ಕೃತಿಯ ಲೇಖಕ ವಿದ್ವಾನ್ ರಂಗನಾಥಶರ್ಮಾರವರಿಗೆ ಹೃತ್ಪೂರ್ವಕ ನಮಸ್ಕಾರಗಳು. ಬಹುಬೇಗನೇ ಸುಂದರವಾಗಿ ಈ ಆವೃತ್ತಿಯನ್ನುಮುದ್ರಿಸಿಕೊಟ್ಟ ಶ್ರೀ ಪ್ರಸಿದ್ಧಿ ಟೆಕ್, ಬೆಂಗಳೂರು ಅವರಿಗೂ, ಮರುಮುದ್ರಣದಲ್ಲಿ ನೆರವಾದ ಶ್ರೀ ಮಾರ್ತಾಂಡರಾವ್. ಕೃ. ನಾಡಿಗೇರ, ಜಡೆ ಇವರಿಗೂ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ.

ಸದ್ಗುರು ಶ್ರೀ ಶ್ರೀಧರಸ್ವಾಮಿಗಳವರ ಪಾದಾರವಿಂದಗಳಲ್ಲಿ ಈ ಕೃತಿಯನ್ನು ಸಮರ್ಪಿಸುತ್ತಾ, ಸಮಸ್ತ ಭಕ್ತವೃಂದವನ್ನು ಅನುಗ್ರಹಿಸಬೇಕೆಂದು ಪ್ರಾರ್ಥಿಸುತ್ತಿದ್ದೇವೆ.

ಸರ್ವಧಾರೀ ಸಂವತ್ಸರ
ಮಾರ್ಗಶೀರ್ಷ ಶುಕ್ಲ ಸಪ್ತಮೀ
05-12-2008 ಶುಕ್ರವಾರ

**ಶ್ರೀ ಶ್ರೀಧರ ಸೇವಾ ಮಂಡಲ (ರಿ.)**
ಶ್ರೀ ಶ್ರೀಧರಾಶ್ರಮ,
ಶ್ರೀ ಕ್ಷೇತ್ರ ವರದಪುರ
ಸಾಗರ.

# ವರದಪುರದ ಮಹಾಯೋಗಿ

## ದತ್ತಾವತಾರ

ಈಗಿನ ಮಹಾರಾಷ್ಟ್ರ ಪ್ರದೇಶಕ್ಕೆ ಸೇರಿದ ನಾಂದೇಡ ಜಿಲ್ಲೆಯಲ್ಲಿ ದೇಗಲೂರು ಎಂಬ ಗ್ರಾಮವಿದೆ. ಇದು ಗೋದಾವರೀ ನದಿಯ ತೀರದಲ್ಲಿದೆ. ಇಲ್ಲಿ "ಪತಕೀ" ಎಂಬ ಅಡ್ಡ ಹೆಸರಿನ ಒಂದು ಬ್ರಾಹ್ಮಣ ಮನೆತನವಿತ್ತು. ಅದು ಋಗ್ವೇದೀಯ ದೇಶಸ್ಥ ಬ್ರಾಹ್ಮಣರ ವರ್ಗಕ್ಕೆ ಸೇರಿದ್ದು. ಆ ಮನೆತನದ ಗಿರಿಮಾಜಿ ಎಂಬವರ ಮಕ್ಕಳಲ್ಲಿ ತಿರುಮಾಜಿ ಎಂಬವರು ಒಬ್ಬರು. ತಿರುಮಾಜಿಯವರಿಗೆ ಗೋವಿಂದ, ನಾರಾಯಣ ಎಂಬ ಇಬ್ಬರು ಮಕ್ಕಳು. ಈ ಬಾಲಕರು ಚಿಕ್ಕವರಾಗಿದ್ದಾಗಲೇ ತಾಯಿ ತಂದೆಗಳು ಸ್ವರ್ಗಸ್ಥರಾದರು. ಅಜ್ಜ ಗಿರಿಮಾಜಿಯವರೂ ಗತಿಸಿದರು. ಆಗ ಅನಾಥರಾದ ಈ ಮಕ್ಕಳು ತಮ್ಮ ಚಿಕ್ಕಪ್ಪನ ಪೋಷಣೆಗೆ ಒಳಗಾದರು. ಚಿಕ್ಕಪ್ಪನ ಮನೆಯಲ್ಲಿ ಹಗಲೂ ರಾತ್ರಿ ಕೆಲಸ ಮಾಡಬೇಕಾಗುತ್ತಿತ್ತು. ವಿದ್ಯಾಭ್ಯಾಸಕ್ಕೆ ಅವಕಾಶವೇ ಆಗಲಿಲ್ಲ. ಕಡೆಗೆ ಅಲ್ಲಿಯ ಕಿರುಕುಳವನ್ನು ತಡೆಯಲಾರದೆ ಈ ಬಾಲಕರು ಮನೆ ಬಿಟ್ಟು ಹೈದರಾಬಾದಿಗೆ ಬಂದು ಸೇರಿದರು. ಅಲ್ಲಿ ಒಬ್ಬ ಶ್ರೀಮಂತನಾದ ಗೃಹಸ್ಥ ಇವರ ಕರುಣಾಜನಕವಾದ ಕಥೆಯನ್ನು ಕೇಳಿ ತನ್ನ ಮನೆಯಲ್ಲಿ ಆಶ್ರಯವಿತ್ತನು. ಆತನ ಮನೆಯಲ್ಲಿ ಗೋವಿಂದ, ನಾರಾಯಣ ಎಂಬ ಈ ಬಾಲಕರು ಮನೆಗೆಲಸವನ್ನು ಮಾಡುತ್ತ ಸಾಕಷ್ಟು ವಿದ್ಯಾಭ್ಯಾಸವನ್ನೂ ಮಾಡಿದರು. ಆ ಗೃಹಸ್ಥನೇ ಇವರಿಗೆ ನೌಕರಿಯನ್ನು ಕೊಡಿಸಿದನು. ಇವರ ಸದ್ಗುಣಗಳಿಂದ ಮುಗ್ಧನಾದ ಆತನು ಇವರಿಬ್ಬರ ಮದುವೆಯನ್ನೂ ಮಾಡಿಸಿದನು. ಹೀಗೆ ಈ ಬಾಲಕರು ತಮ್ಮ ಯೋಗ್ಯತೆಯಿಂದಲೇ ಸಮಾಜದಲ್ಲಿ ಒಂದು

ಸ್ಥಾನವನ್ನು ಗಳಿಸಿ ಗೋವಿಂದರಾಯರು, ನಾರಾಯಣರಾಯರು ಎಂದು ಪ್ರಸಿದ್ಧರಾದರು.

ಮದುವೆಯಾದ ಮೇಲೆ ಈ ಸೋದರರು ಆ ಶ್ರೀಮಂತನ ಮನೆಯನ್ನು ಬಿಟ್ಟು ಬೇರೆ ಮನೆ ಮಾಡಿ ಸಂಸಾರವನ್ನು ನಡೆಸುತ್ತಿದ್ದರು. ಒಳ್ಳೆಯ ಆಚಾರಶೀಲರಾದ್ದರಿಂದ ಅದುವರೆಗೆ ನಿಂತುಹೋಗಿದ್ದ ತಮ್ಮ ಮನೆತನದ ಕುಲಾಚಾರಗಳನ್ನು ಮತ್ತೆ ಪ್ರಾರಂಭಿಸಿದರು. ಶ್ರೀರಾಮನವಮಿ, ನವರಾತ್ರಿ, ಶಿವರಾತ್ರಿ ಮುಂತಾದ ವ್ರತಗಳು ವೈಭವದಿಂದ ನಡೆಯತೊಡಗಿದವು. ಏಕಾದಶಿಯ ದಿನ ಭಗವದ್ಗೀತಾ ಪಾರಾಯಣ, ಭಜನೆ ಮೊದಲಾದ ಕಾರ್ಯಕ್ರಮಗಳು ಜರಗುತ್ತಿದ್ದವು. ಇಬ್ಬರು ಸೋದರರೂ ಗುಣಸಂಪನ್ನರೂ ಸಾತ್ವಿಕರೂ ದೈವಭಕ್ತರೂ ಅಗಿದ್ದರು.

ಹೀಗಿರಲು ನಾರಾಯಣರಾಯರಿಗೆ ಪತ್ನೀವಿಯೋಗವಾಯಿತು. ಆಗ ಅವರಿಗೆ ಮೂವತ್ತು ವರ್ಷ ವಯಸ್ಸು. ಅನಂತರ ಅವರು ಕಮಲಾಬಾಯಿ ಎಂಬ ಕನ್ಯೆಯನ್ನು ಮದುವೆಯಾದರು. ಈ ನಾರಾಯಣರಾಯರು – ಕಮಲಾಬಾಯಿ ಎಂಬ ದಂಪತಿಗಳೇ ದತ್ತಾವತಾರವೆಂದು ಲೋಕ – ಖ್ಯಾತರಾದ ಶ್ರೀಧರಸ್ವಾಮಿಗಳಿಗೆ ಜನ್ಮ ವಿತ್ತ ತಂದೆತಾಯಿಗಳು.

ಶ್ರೀಧರಸ್ವಾಮಿಗಳು ನಾಡಿನ ಎಲ್ಲೆಡೆಯೂ ಪ್ರಸಿದ್ಧರಾಗಿದ್ದ ಒಬ್ಬ ಮಹಾಪುರುಷರು. ಅವರೇನೂ ಮಠಾಧಿಪತಿಗಳಲ್ಲ. ಊರಿಂದೂರಿಗೆ ಸಂಚರಿಸುತ್ತಿದ್ದ ಸಂನ್ಯಾಸಿ ಅವರು. ಬಡವರನ್ನು, ಕಷ್ಟದಲ್ಲಿದ್ದವರನ್ನು ಕಂಡರೆ ಶ್ರೀಧರಸ್ವಾಮಿಗಳಿಗೆ ಅಪಾರವಾದ ಕರುಣೆ. ತಮ್ಮ ಭಕ್ತವೃಂದದಲ್ಲಿನ ಶ್ರೀಮಂತರಿಂದ ಆ ಜನರಿಗೆ ಹಣ, ಆಹಾರ, ಬಟ್ಟೆ ಮೊದಲಾದ್ದನ್ನು ಕೊಡಿಸುತ್ತಿದ್ದರು. ತಾವು ಮಾತ್ರ ಹಣವನ್ನು ಕೈಯಿಂದಲೂ ಮುಟ್ಟುತ್ತಿರಲಿಲ್ಲ. ಕಣ್ಣೆತ್ತಿಯೂ ನೋಡುತ್ತಿರಲಿಲ್ಲ. ಅವರು

ಸಂನ್ಯಾಸಿ ಎಂಬ ಹೆಸರಿಗೆ ತಕ್ಕಂತೆ ಎಲ್ಲವನ್ನೂ ತ್ಯಜಿಸಿದ ಬೈರಾಗಿಯಾಗಿದ್ದರು. ನೀತಿಯನ್ನು, ಧರ್ಮವನ್ನು ಬೋಧಿಸುತ್ತ ಸದಾ ಜನರ ಕಲ್ಯಾಣವನ್ನು ಚಿಂತಿಸುತ್ತ ತಮ್ಮ ದೇಹವನ್ನು ಸವೆಸಿದರು. ಅವರಿಗೆ ಸನಾತನವಾದ ವೈದಿಕ ಧರ್ಮದಲ್ಲಿ ದೃಢವಾದ ವಿಶ್ವಾಸ. ಅದರಿಂದಲೇ ಲೋಕ ಕಲ್ಯಾಣವಾಗುತ್ತದೆ ಎಂದು ಅವರು ನಂಬಿದ್ದರು. ತಮ್ಮ ದೇಹ ಸುಖಕ್ಕಾಗಿ ಸ್ವಲ್ಪವೂ ಹಂಬಲಿಸದೆ ಜನರ ಹಿತಕ್ಕಾಗಿ ಉಪದೇಶ ಮಾಡುತ್ತ ಊರಿಂದೂರಿಗೆ ಸಂಚರಿಸಿದರು. ಅವಕಾಶವಾದಾಗ ಕಠೋರವಾದ ತಪಸ್ಸಿನಲ್ಲಿ ತೊಡಗುತ್ತಿದ್ದ ಶ್ರೀಧರಸ್ವಾಮಿಗಳು ಪ್ರಾಚೀನ ಕಾಲದ ಋಷಿಗಳನ್ನು ನೆನಪಿಗೆ ತರುತ್ತಿದ್ದರು.

ಈ ಮಹನೀಯರು ಕಡೆಗೆ ವರದಹಳ್ಳಿಯಲ್ಲಿ ನೆಲೆಸಿ ದೀರ್ಘವಾದ ತಪಸ್ಸನ್ನು ಕೈಗೊಂಡರು. ವರದಹಳ್ಳಿಯು ಶಿವಮೊಗ್ಗ ಜಿಲ್ಲೆಯಲ್ಲಿ ಸಾಗರಕ್ಕೆ ಸುಮಾರು ಆರು ಕಿ.ಮೀ. ದೂರದಲ್ಲಿದೆ. ಅದನ್ನು "ವದ್ದಳ್ಳಿ" ಎಂದು ಆ ಪ್ರಾಂತದವರು ಕರೆಯುತ್ತಾರೆ.

ನಾರಾಯಣರಾಯರಿಗೆ ಕಮಲಾಬಾಯಿಯಲ್ಲಿ ಮೊದಲು ತ್ರಿಯಂಬಕನೆಂಬ ಮಗನು ಜನಿಸಿದನು. ಅನಂತರ ಗೋವಿಂದನೆಂಬ ಇನ್ನೊಬ್ಬ ಮಗನು ಹುಟ್ಟಿ ತನ್ನ ಮೂರನೆಯ ಮಯಸ್ಸಿನಲ್ಲಿ ಮೃತನಾದನು. ಆಮೇಲೆ ಗೋದಾವರಿ ಎಂಬ ಮಗಳು ಜನಿಸಿದಳು. ಅವಳಿಗೆ ಎಂಟನೆಯ ವರ್ಷ ತುಂಬುತ್ತಿದ್ದಂತೆ, ಆ ಕಾಲದ ಪದ್ಧತಿಯಂತೆ ವಿವಾಹವಾಯಿತು. ಈ ಸಮಯದಲ್ಲಿ ಒಬ್ಬ ಜ್ಯೋತಿಃಶಾಸ್ತ್ರದ ವಿದ್ವಾಂಸರು ನಾರಾಯಣರಾಯರ ಮನೆಗೆ ಆಗಮಿಸಿದರು. ನಾರಾಯಣರಾಯರು ತಮ್ಮ ಹಾಗೂ ತಮ್ಮ ಧರ್ಮಪತ್ನಿಯ ಜಾತಕಗಳನ್ನು ಅವರಿಗೆ ತೋರಿಸಿದರು. ಆ ವಿದ್ವಾಂಸರು ಜಾತಕಗಳನ್ನು ಚೆನ್ನಾಗಿ ಪರೀಕ್ಷಿಸಿ "ನಾರಾಯಣರಾಯರೇ, ನನಗೆ ಕಂಡು ಬಂದ ಒಂದು ಸತ್ಯಸಂಗತಿಯನ್ನು ನಿಮಗೆ ತಿಳಿಸಬೇಕಾಗಿದೆ. ಒಂದು ಸರ್ಪ

ಶಾಪವಿರುವುದರಿಂದ ನಿಮ್ಮ ಸಂತತಿ ನಡೆಯುವುದಿಲ್ಲ. ಆದರೆ ನಿಮಗೆ ಇನ್ನೊಂದು ಪುತ್ರಯೋಗವಿದೆ. ಆತನು ಮಹಾಪುರುಷನಾಗಿ ನಿಮ್ಮ ವಂಶವನ್ನು ಉದ್ಧಾರಮಾಡುವನು. ನೀವು ಶ್ರೀದತ್ತ ಕ್ಷೇತ್ರವಾದ ಗಾಣಗಾಪುರಕ್ಕೆ ಹೋಗಿ ಶ್ರೀ ದತ್ತಾತ್ರೇಯನ ಸೇವೆ ಮಾಡಿರಿ" ಎಂದು ಹೇಳಿ ಹೊರಟುಹೋದರು. ನಾರಾಯಣರಾಯರು ತಮ್ಮ ಪತ್ನಿಯೊಡನೆ ಗಾಣಗಾಪುರಕ್ಕೆ ಹೋಗಿ, ಕೆಲವು ಕಾಲ ಅಲ್ಲಿದ್ದು ವ್ರತ-ಉಪವಾಸ-ಭಜನೆಗಳಿಂದ ಶ್ರೀ ದತ್ತಾತ್ರೇಯನನ್ನು ಸೇವಿಸಿ ಹಿಂದಿರುಗಿದರು.

ಸ್ವಲ್ಪ ಕಾಲದಲ್ಲಿ ಕಮಲಾಬಾಯಿಯವರು ಗರ್ಭಿಣಿಯಾದರು. ಅವರ ತಾಯಿ ಬಯಾಬಾಯಿಯವರು ಪ್ರಸವಕ್ಕಾಗಿ ಮಗಳನ್ನು ತಾವು ವಾಸವಾಗಿದ್ದ ಲಾಡಚಿಂಚೋಳಿ (ಗುಲ್ಬರ್ಗ ಜಿಲ್ಲೆ) ಎಂಬ ಗ್ರಾಮಕ್ಕೆ ಕರೆದುಕೊಂಡು ಹೋದರು. ಲಾಡಚಿಂಚೋಳಿಯಲ್ಲಿ ಶ್ರೀ ದತ್ತಜಯಂತಿ ಉತ್ಸವ ವಿಜೃಂಭಣೆಯಿಂದ ನಡೆಯುತ್ತದೆ. ಇದು ಪ್ರತಿ ವರ್ಷ ಮಾರ್ಗಶಿರ ಪೂರ್ಣಿಮೆಯಂದು ಬರುತ್ತದೆ. ಜಯಂತಿಯ ದಿನ ಗ್ರಾಮದ ಎಲ್ಲೆಡೆಯೂ "ದಿಗಂಬರಾ ದಿಗಂಬರಾ ಶ್ರೀಪಾದವಲ್ಲಭ ದಿಗಂಬರಾ" ಎಂಬ ಭಜನೆ ವ್ಯಾಪಿಸಿರುತ್ತದೆ. ಸಂಜೆ ಶ್ರೀ ದತ್ತನ ಪಲ್ಲಕ್ಕಿ ಉತ್ಸವ ದೇವಸ್ಥಾನದಿಂದ ಹೊರಟು ಮೆರವಣಿಗೆಯಲ್ಲಿ ಬಂದಿತು. ಕಮಲಾಬಾಯಿಯವರು ವಾಸವಾಗಿದ್ದ ದೇಸಾಯಿಯವರ ಮನೆಯ ಎದುರಿಗೆ ಪಲ್ಲಕ್ಕಿಯು ಬಂದು ನಿಂತು ಮುಂಗಳಾರತಿ ಪಡೆಯುತ್ತಿತ್ತು. ಈ ಸಮಯಕ್ಕೆ ಸರಿಯಾಗಿ-ಕೀಲಕ ಸಂವತ್ಸರದ ಮಾರ್ಗಶಿರ ಶುದ್ಧ ಪೂರ್ಣಿಮಾ ಸೋಮವಾರ ತಾ. 07-12-1908ರ ರಾತ್ರಿ ಏಳುಗಂಟೆ ಇಪ್ಪತ್ತು ನಿಮಿಷಕ್ಕೆ ಕಮಲಾಬಾಯಿಯವರಿಗೆ ಪುತ್ರೋತ್ಸವವಾಯಿತು!. ಈ ಪುತ್ರನೇ ಶ್ರೀಧರ. ಇಂದಿಗೂ ಶ್ರೀಧರಸ್ವಾಮಿಗಳ ಭಕ್ತರು ಅವರನ್ನು ಶ್ರೀ ದತ್ತಾತ್ರೇಯನ ಅವತಾರವೆಂದು ನಂಬಿದ್ದಾರೆ.

# ಬಾಲ್ಯ

ತಾಯಿತಂದೆಗಳು ಗಾಣಾಗಾಪುರದಲ್ಲಿ ಶ್ರೀ ದತ್ತಾತ್ರೇಯನ ಸೇವ ಮಾಡಿ ಬಂದ ಮೇಲೆ ಶ್ರೀಧರನು ಹುಟ್ಟಿದನು. ಹುಟ್ಟಿದ ದಿನ ಶ್ರೀದತ್ತ ಪೂರ್ಣಿಮೆ. ದೇವರ ಪಲ್ಲಕ್ಕಿ ಉತ್ಸವ ಮನೆಯ ಬಾಗಿಲಿಗೆ ಬಂದಾಗ ಈ ಮಗುವಿನ ಜನನ. ಜ್ಯೋತಿಃಶಾಸ್ತ್ರದ ವಿದ್ವಾಂಸರು ಹೇಳಿದಂತಹ ಶುಭಲಕ್ಷಣಗಳು ಕಾಣಿಸಿದ್ದರಿಂದ ಈ ಮಗು ಮುಂದೆ ಮಹಾಪುರುಷನಾಗುವನೆಂದು ತಾಯಿತಂದೆಗಳ ಮನಸ್ಸಿಗೆ ನಿಶ್ಚಯವಾಗಿತ್ತು. ಬಹಳ ಪ್ರೀತಿಯಿಂದ ಶ್ರೀಧರನನ್ನು ಸಾಕುತ್ತಿದ್ದರು. ತಾಯಿ ಶ್ರೀಧರನನ್ನು ವಾತ್ಸಲ್ಯದಿಂದ 'ರಾಜ' ಎಂದು ಕರೆಯುತ್ತಿದ್ದರು. ಮನೆಯ ತಾಯ್ನುಡಿ ಮರಾಠಿ.

ಶ್ರೀಧರನು ಮಗುವಾಗಿದ್ದಾಗಲೇ ತಂದೆ ನಾರಾಯಣರಾಯರು ತೀರಿಕೊಂಡರು. ಸಂಸಾರಕ್ಕೆ ದೊಡ್ಡ ಪೆಟ್ಟು ಬಿದ್ದಿತು. ಹಿರಿಯ ಮಗ ತ್ರಿಯಂಬಕನು ಗತ್ಯಂತರವಿಲ್ಲದೆ ವಿದ್ಯಾಭ್ಯಾಸವನ್ನು ನಿಲ್ಲಿಸಿ ಯಾವುದೋ ನೌಕರಿಗೆ ಸೇರಬೇಕಾಯಿತು. ಮನೆಯಲ್ಲಿ ನಡೆಯುವ ಪೂಜೆ, ಭಜನೆ ಮೊದಲಾದವು ನಿಲ್ಲಲಿಲ್ಲ. ಅಲ್ಲದೆ ದೊಡ್ಡಪ್ಪ ಗೋವಿಂದರಾಯರ ಮನೆಯಲ್ಲಿ ಪ್ರತಿ ದ್ವಾದಶಿಯ ದಿನ ಶ್ರೀರಾಮನಿಗೆ ತುಳಸೀ ಸಹಸ್ರನಾಮಾರ್ಚನೆ, ಅನ್ನ ಸಂತರ್ಪಣೆ ಮೊದಲಾದವು ನಡೆಯುತ್ತಿದ್ದವು. ಬಾಲಕ ಶ್ರೀಧರನು ಈ ಪೂಜಾದಿಗಳಲ್ಲಿ ಭಾಗವಹಿಸುತ್ತಿದ್ದನು. ಹೀಗೆ ಮನೆಯ ಪರಿಸರದಿಂದ ಬಾಲ್ಯದಲ್ಲಿಯೇ ಶ್ರೀಧರನ ಮನಸ್ಸಿನ ಮೇಲೆ ಸನಾತನಧರ್ಮದ ಸಂಸ್ಕಾರ ಮೂಡಿತು. ಶ್ರೀರಾಮಭಜನೆ, ದತ್ತ ಜಯಂತಿ, ಹರಿಕೀರ್ತನೆಗಳು ಆತನಲ್ಲಿ ತುಂಬ ಆಸಕ್ತಿಯನ್ನು ಬೆಳೆಸಿದವು. ಭಜನೆ, ಕೀರ್ತನೆಗಳು ಪದ್ಯಗಳು ಅವನಿಗೆ ಕಂಠಪಾಠವಾದವು. ವಯಸ್ಸು ಇನ್ನೂ ಐದುವರ್ಷಗಳಾಗಿರಲಿಲ್ಲ. ಹರಿದಾಸರಂತೆ ನಟಿಸುತ್ತಾ ತಾಯಿಯ ಎದುರಿಗೆ "ಹರಿಕಥೆ" ಮಾಡುತ್ತಿದ್ದನು.

ಆಗ ಶ್ರೀಧರನು ಇದ್ದುದು ಹೈದರಾಬಾದಿನಲ್ಲಿ. ಅಲ್ಲಿಯ ಹುಸೇನಿ ಅಲವನ್ ಎಂಬ ಪ್ರದೇಶದಲ್ಲಿ ಶ್ರೀ ನಾರಾಯಣ ಬುವಾ ರಾಮದಾಸೀ ಮಹಾರಾಜರೆಂಬ ಸಾಧುಗಳ ಮಠವಿತ್ತು. ಅವರು ಶ್ರೀಸಮರ್ಥರಾಮದಾಸರ ಸಂಪ್ರದಾಯದವರು. ಸಜ್ಜನಗಡದಲ್ಲಿ ಹನ್ನೆರಡು ವರ್ಷಗಳ ಕಾಲ ತಪಸ್ಸು ಮಾಡಿದ್ದರು. ತುಂಬ ಸಾತ್ವಿಕರೂ, ತಪಸ್ವಿಗಳೂ ಆಗಿದ್ದರು. ಬಾಲಕ ಶ್ರೀಧರನಿಗೆ ಹೇಗೋ ಆ ಮಠದ ಸಾಧುಗಳ ಪರಿಚಯವಾಗಿ ಅಲ್ಲಿ ನಡೆಯುವ ಭಜನೆ, ಕೀರ್ತನೆ ಮೊದಲಾದ ಕಾರ್ಯಕ್ರಮಗಳಿಗೆ ಹೋಗುತ್ತಿದ್ದನು. ಒಂದು ತುಳಸೀ ಮಣಿಯ ಜಪಮಾಲೆಯನ್ನು ಸಂಪಾದಿಸಿಕೊಂಡು ದೊಡ್ಡವರಂತೆ ತಾನು ಶ್ರೀರಾಮಜಪವನ್ನು ಮಾಡುತ್ತ ಕುಳಿತಿರುತ್ತಿದ್ದನು. ಹೈದರಾಬಾದಿನ ಯಾವ ಸ್ಥಳದಲ್ಲಿ ಹರಿಕಥೆ ಮೊದಲಾದ ಸತ್ಸಂಗದ ಕಾರ್ಯಕ್ರಮಗಳು ನಡೆದರೂ ತಾಯಿ ಕಮಲಾಬಾಯಿಯವರು ಹೋಗುತ್ತಲಿದ್ದರು. ತಾಯಿಯ ಜೊತೆಗೆ ಶ್ರೀಧರನು ಹೋಗುವುದೂ ನಿಶ್ಚಯವಾಗಿತ್ತು.

ಶ್ರೀಧರನು ಸದಾ ಹಾಡಿಕೊಳ್ಳುತ್ತಿದ್ದ ಒಂದು ಪದ್ಯ ಇದು:

**ಘಟಿಕಾಗೇಲೀ ಪಳೇಗೇಲೀ ತಾಸವಾಜೇ ಝಣಾಣಾ ।**
**ಆಯುಷ್ಯಾಚಾ ನಾಶಹೋತೋ 'ರಾಮ' ಕಾರೇಮ್ಹಣಾನಾ ॥**

"ಗಳಿಗೆ, ನಿಮಿಷ ಕಳೆದು ಹೋದವು. ಘಂಟೆ ಝಣ ಝಣ ಎಂದಿತು. ಆಯಸ್ಸು ಸುಮ್ಮನೆ ಕಳೆದು ಹೋಗುತ್ತಿದೆ. 'ರಾಮ' ಎಂಬ ನಾಮವನ್ನು ಏಕೆ ಹೇಳುವುದಿಲ್ಲ?"

## ವಿದ್ಯಾಭ್ಯಾಸ

ಶ್ರೀಧರನ ವಿದ್ಯಾಭ್ಯಾಸ ಒಂದು ಕಡೆಯಲ್ಲಿ ಕ್ರಮವಾಗಿ ನಡೆಯಲಿಲ್ಲ, ಕುಟುಂಬದಲ್ಲಿ ನಡೆದ ಕೆಲವು ಘಟನೆಗಳಿಂದಾಗಿ ಆತನಿಗೆ ಮಾರ್ಗದರ್ಶನ ಮಾಡತಕ್ಕವರೂ ನೆರವಾಗತಕ್ಕವರೂ ಯಾರೂ

ಉಳಿಯಲಿಲ್ಲ. ಅವನೊಬ್ಬ ಅನಾಥ ಬಾಲಕನೇ ಆದನು. ಆದರೂ ವಿದ್ಯೆಯನ್ನು ಕಲಿಯಬೇಕೆಂಬ ತೀವ್ರವಾದ ಬಯಕೆಯಿದ್ದುದರಿಂದ ಆತನ ವಿದ್ಯಾಭ್ಯಾಸ ಆಗಿನ ಮೆಟ್ರಿಕ್ ತರಗತಿಯವರೆಗೆ (ಎಸ್.ಎಸ್.ಎಲ್.ಸಿ) ಹೇಗೋ ಸಾಗಿತು. ಇದೊಂದು ಕರುಣ ಕಥೆಯೇ ಆಗಿದೆ.

ಶ್ರೀಧರನ ಪ್ರಾಥಮಿಕ ವಿದ್ಯಾಭ್ಯಾಸ ಹೈದರಾಬಾದಿನ ವಿವೇಕವರ್ಧಿನೀ ಶಾಲೆಯಲ್ಲಿ ನಡೆಯಿತು. ಮರಾಠಿ ಐದನೆಯ ತರಗತಿಯವರೆಗೆ ಅಲ್ಲಿ ಓದಿದನು. ಖಾಸಗಿಯಾಗಿ ಇಂಗ್ಲೀಷಿನ ಮೂರನೆಯ ಪುಸ್ತಕದವರೆಗೂ, ಉರ್ದು ಭಾಷೆಯ ನಾಲ್ಕನೆಯ ಪುಸ್ತಕದವರೆಗೂ ಅಲ್ಲಿಯೇ ವ್ಯಾಸಂಗ ನಡೆಯಿತು. ಮನೆಯಲ್ಲಿ ಬಡತನ. ಅಣ್ಣನಾದ ತ್ರಿಯಂಬಕನ ಸಂಬಳದಿಂದ ಹೇಗೋ ಸಂಸಾರ ನಡೆಯುತ್ತಿತ್ತು. ಬಾಲಕನು ಚುರುಕು ಬುದ್ಧಿಯವನಾದ್ದರಿಂದ ತರಗತಿಯಲ್ಲಿ ಮೊದಲನೆಯವನಾಗಿದ್ದನು. ತನ್ನ ವಿದ್ಯಾಭ್ಯಾಸದಿಂದಲೂ ಒಳ್ಳೆಯ ನಡತೆಯಿಂದಲೂ ಎಲ್ಲ ಉಪಾಧ್ಯಾಯರ ಪ್ರೀತಿಯನ್ನು ಗಳಿಸಿದ್ದನು. ತಾಯಿಗೆ ಮನೆಗೆಲಸದಲ್ಲಿ ನೆರವಾಗುತ್ತಿದ್ದನಲ್ಲದೆ ಆಕೆಗೆ ಅನಾರೋಗ್ಯವಾದಾಗ ಅಡಿಗೆಯ ಕೆಲಸವನ್ನೂ ಇವನೇ ಮಾಡುತ್ತಿದ್ದನು. ಇದರ ಜೊತೆಗೆ ಭಜನೆ, ಹರಿಕೀರ್ತನೆಗಳ ಗೀಳು ಹೆಚ್ಚುತ್ತಲೇ ಇತ್ತು. ಈ ನಡುವೆ ದೊಡ್ಡಪ್ಪ ಗೋವಿಂದರಾಯರು ವೃದ್ಧರಾಗಿ ಕಾಯಿಲೆಗಳಿಂದ ನರಳುತ್ತಿದ್ದರು. ಅವರ ಹೆಂಡತಿ ಮೃತಳಾಗಿದ್ದಳು. ಮಕ್ಕಳಿರಲಿಲ್ಲ. ಆದ್ದರಿಂದ ಶ್ರೀಧರನೇ ದೊಡ್ಡಪ್ಪನ ಸೇವೆಯನ್ನು ಶ್ರದ್ಧೆಯಿಂದ ನಡೆಸುತ್ತಿದ್ದನು.

ಶ್ರೀಧರನ ಉಪನಯನ ಒಂದು ಶಿವದೇವಾಲಯದಲ್ಲಿ ನಡೆಯಿತು. ಅದರ ಬಳಿ ಒಂದು ಮಾರುತಿ ಮೂರ್ತಿಯೂ, ಔದುಂಬರ ವೃಕ್ಷವೂ (ಅತ್ತಿಯ ಮರ) ಇದ್ದವು. ಶ್ರೀಧರನು ಪ್ರತಿದಿನವೂ ಶಿವದೇವಾಲಯಕ್ಕೆ ಹೋಗಿ ಶಿವನಿಗೂ ಮಾರುತಿಗೂ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ ಔದುಂಬರ ವೃಕ್ಷದ ಕೆಳಗೆ ಸಂಧ್ಯಾವಂದನೆಯನ್ನು ಮಾಡಿ ಜಪಮಾಡುವ

ಪದ್ಧತಿಯನ್ನು ಆರಂಭಿಸಿದನು. ಉಪನಯನವಾದ ಕೆಲವು ತಿಂಗಳಲ್ಲಿ ದೊಡ್ಡಪ್ಪ ಗೋವಿಂದರಾಯರು ನಿಧನ ಹೊಂದಿದರು. ಆ ಸಮಯದಲ್ಲಿ ತ್ರಿಯಂಬಕನು ಜ್ವರದಿಂದ ಹಾಸಿಗೆ ಹಿಡಿದಿದ್ದನು. ಗೋವಿಂದರಾಯರ ಉತ್ತರಕ್ರಿಯೆ ಎಲ್ಲವನ್ನೂ ಬಾಲಕನಾದ ಶ್ರೀಧರನೇ ನಡೆಸಿದನು. ಸ್ವಲ್ಪದಿನಗಳಲ್ಲಿ ಅಣ್ಣನಾದ ತ್ರಿಯಂಬಕನು ಸ್ವರ್ಗಸ್ಥನಾದನು. ಮನೆಗೆ ಆಧಾರವಾಗಿದ್ದ ಹಿರಿಯಮಗನ ಮರಣದಿಂದ ತಾಯಿ ಕಮಲಾಬಾಯಿಯವರು ದುಃಖದಿಂದ ಗೋಳಾಡಿದರು. ಅವರನ್ನು ಶ್ರೀಧರನೇ ಒಳ್ಳೆಯ ಮಾತುಗಳಿಂದಲೂ ವೇದಾಂತದ ನುಡಿಗಳಿಂದಲೂ ಸಂತೈಸುತ್ತಿದ್ದನು. ಇದೊಂದು ಅಚ್ಚರಿಯ ಸಂಗತಿ. ಆ ಸಮಯದಲ್ಲಿ ತಾಯಿಗೆ ಹೇಳಿದ ಸಾಂತ್ವನದ ನುಡಿಗಳನ್ನು ಮುಂದೆ ಶ್ರೀಧರಸ್ವಾಮಿಗಳು ಸ್ಮರಿಸಿಕೊಂಡು ಹೇಳಿದ್ದುಂಟು. ಏನೆಂದರೆ, "ಅಮ್ಮ, ಅಣ್ಣನಲ್ಲಿ ನೀನು ಪ್ರೀತಿಸುವ ವಸ್ತು ಯಾವುದು?. ನೀನು ಪ್ರೀತಿಸುವುದು ಅವನ ಆತ್ಮವನ್ನು, ಆತ್ಮಕ್ಕೆ ಹುಟ್ಟು ಸಾವುಗಳಿಲ್ಲ. ಅದು ಯಾವಾಗಲೂ ಇದ್ದೇ ಇರುತ್ತದೆ. ಹುಟ್ಟು ಸಾವುಗಳಿರುವುದು ಶರೀರಕ್ಕೆ. ಶರೀರವೆಂದರೆ ಪಂಚಭೂತಗಳ ಸಮುದಾಯ. ಭೂಮಿ, ನೀರು, ಗಾಳಿ, ಅಗ್ನಿ, ಆಕಾಶ ಇವೇ ಪಂಚಭೂತಗಳು. ಶರೀರವು ಈ ಪಂಚಭೂತಗಳಲ್ಲಿ ಸೇರಿಹೋಗುವುದೇ ಸಾವು. ಪರಮಾತ್ಮನ ಇಚ್ಛೆಯಂತೆ ಈ ಪಂಚಭೂತಗಳೇ ಒಂದು ಆಕೃತಿಯಲ್ಲಿ ಸೇರಿಕೊಂಡರೆ ಶರೀರವಾಗುತ್ತದೆ. ಈ ಶರೀರದ ಸಂಬಂಧವೇ ಹುಟ್ಟು. ಅಣ್ಣನ ಆತ್ಮಕ್ಕೆ ಮರಣವೆಂಬುದೇ ಇಲ್ಲ. ನೀನು ಇದಕ್ಕಾಗಿ ಅಳಬಾರದು." ಹತ್ತು – ಹನ್ನೆರಡು ವರ್ಷದ ಹುಡುಗನಲ್ಲಿ ಇಷ್ಟು ತಿಳಿವಳಿಕೆ ಇರುವುದೇ ಎಂದು ನಮಗೆ ಆಶ್ಚರ್ಯವಾಗಬಹುದು. ಆದರೆ ಶ್ರೀಧರನು ಸಾಧುಗಳ ಉಪನ್ಯಾಸ, ಸತ್ಸಂಗಗಳಲ್ಲಿ ಮುಳುಗಿಹೋಗಿದ್ದನಾದ್ದರಿಂದ ಈ ಮಾತು ಹೇಳುವಷ್ಟು ಜ್ಞಾನ ಅವನಲ್ಲಿ ಆಗಲೇ ಉಂಟಾಗಿತ್ತು. ಕಮಲಬಾಯಿಯವರಿಗೆ ಜ್ಯೋತಿಷ್ಯಶಾಸ್ತ್ರದ ಪಂಡಿತರಾದ ಕುಲಪುರೋಹಿತರು ಹೇಳಿದ ಮಾತು ನೆನಪಿಗೆ ಬಂದಿತು.

ಕೆಲವು ತಿಂಗಳು ಗತಿಸಿದವು. ಶ್ರೀಧರನ ಅಕ್ಕ ಗೋದಾವರಿಯು ಮೃತಳಾದಳೆಂಬ ಸುದ್ದಿ ಸಿಡಿಲಿನಂತೆ ಬಂದೆರಗಿತು. ಈಗ ಕಮಲಾಬಾಯಿಯವರ ದುಃಖಕ್ಕೆ ಪಾರವಿಲ್ಲವಾಯಿತು. ಶ್ರೀಧರನು ತಾಯಿಯನ್ನು ಸಂತೈಸುವುದರಲ್ಲಿ ಹಣ್ಣಾದನು. ಹೇಗೋ ಮತ್ತೆ ಕೆಲವು ದಿನ ಸಂದವು. ಕಮಲಾಬಾಯಿಯವರಿಗೆ ತಮ್ಮ ಮರಣ ಕಾಲವೂ ಬಂದಿತೆಂದು ತೋರಿತು. ಅವರು ಶ್ರೀಧರನ ಕೈಯನ್ನು ಹಿಡಿದುಕೊಂಡು ವಾತ್ಸಲ್ಯದಿಂದ "ರಾಜ, ನಮ್ಮ ಪುರೋಹಿತರು ಹೇಳಿದ ಮಾತು ಸತ್ಯ. ನಮ್ಮ ವಂಶದಲ್ಲಿ ನೀನೊಬ್ಬನೇ ಉಳಿದು ಕೀರ್ತಿಶಾಲಿಯಾಗುತ್ತೀಯೇ. ನಮ್ಮ ಹೆಸರನ್ನು ಉಳಿಸತಕ್ಕವನು ನೀನೇ. ಇನ್ನು ಮೇಲೆ ನಿನ್ನ ತಾಯಿ ಒಬ್ಬಳಲ್ಲ. ಲೋಕದಲ್ಲಿರುವ ಎಲ್ಲ ಸ್ತ್ರೀಯರೂ ನಿನ್ನ ತಾಯಂದಿರೇ ಎಂದು ತಿಳಿ. ಇದರಿಂದಲೇ ನಿನಗೆ ಶ್ರೇಯಸ್ಸಾಗುವುದು" ಎಂದರು. ಶ್ರೀಧರನು "ಅಮ್ಮ, ಖಂಡಿತವಾಗಿ ಹಾಗೆಯೇ ನಡೆಯುವೆನು" ಎಂದನು. ಸ್ವಲ್ಪ ಕಾಲದಲ್ಲಿ ಕಮಲಾಬಾಯಿಯವರು ಇಹಲೋಕದ ಯಾತ್ರೆಯನ್ನು ಮುಗಿಸಿದರು. ನೆರೆಹೊರೆಯವರ ನೆರವಿನಿಂದ ಶ್ರೀಧರನು ತಾಯಿಯ ಅಂತ್ಯಕ್ರಿಯೆಯನ್ನು ವಿಧಿವತ್ತಾಗಿ ನಡೆಸಿದನು.

ಹನ್ನೆರಡು ವರ್ಷದ ಬಾಲಕನಿಗೆ ತಂದೆಯಿಲ್ಲ-ತಾಯಿಯಿಲ್ಲ-ಅಣ್ಣನಿಲ್ಲ-ಅಕ್ಕನಿಲ್ಲ-ದೊಡ್ಡಪ್ಪನೂ ಇಲ್ಲ. ಮನೆಯಲ್ಲಿದ್ದ ಸಾಮಾನುಗಳನ್ನೂ ಕಳ್ಳರು ಒಯ್ದರು!

ಶ್ರೀಧರನಿಗೆ ಇನ್ನೇನುಳಿಯಿತು?

**ದಿಗಂಬರಾ, ದಿಗಂಬರಾ ! ಶ್ರೀಪಾದವಲ್ಲಭ ! ದಿಗಂಬರಾ !**

ಈಗ ಶ್ರೀಧರನನ್ನು ವಿಚಾರಿಸಿಕೊಳ್ಳತಕ್ಕವರಿಲ್ಲ. ಮರುಕಪಡತಕ್ಕವರಿಲ್ಲ. "ಹಸಿವಾಗಿದೆಯೇ? ಊಟ ಮಾಡುವೆಯಾ?" ಎಂದು ಕೇಳತಕ್ಕವರಿಲ್ಲ.

ಹನ್ನೆರಡು ವರ್ಷದ ಇನ್ನೊಬ್ಬ ಸಾಮಾನ್ಯ ಬಾಲಕನು ಈ ಪರಿಸ್ಥಿತಿಗೆ

ಸಿಕ್ಕಿದ್ದರೆ ಏನಾಗುತ್ತಿತ್ತು? ಹೊಟ್ಟೆ ಪಾಡಿಗಾಗಿ ಯಾರ ಮನೆಯಲ್ಲೋ ಕೆಲಸಕ್ಕೆ ಸೇರಿ ಆಯಸ್ಸನ್ನು ಕಳೆಯಬೇಕಾಗಿತ್ತು. ಇಲ್ಲದೆ ಅಂಥ ಹುಡುಗನು ಹೋಟೆಲು, ಸಿನಿಮಾಗಳಲ್ಲಿ ಮೂರುಕಾಸಿನ ಕೂಲಿಗಾಗಿ ದುಡಿಯಬೇಕಾಗಿತ್ತು, ಪೋಲಿ ಜನರ ಸಹವಾಸಕ್ಕೆ ಸಿಕ್ಕಿ ಸ್ವತಃ ಪೋಲಿಯಾಗುತ್ತಿದ್ದನು.

ಚಿನ್ನವನ್ನು ಬೆಂಕಿಯಲ್ಲಿ ಕಾಯಿಸಿದರೂ, ಬಡಿದರೂ ಅದು ಇನ್ನೂ ಹೆಚ್ಚಾಗಿ ಹೊಳೆಯುತ್ತದೆ. ತೆಂಗಿನ ಸಸಿಯನ್ನು ನೆಲದಲ್ಲಿ ಹೂತು ತುಳಿದರೂ ಅದು ಸಿಹಿನೀರನ್ನು ಕೊಡುವುದಕ್ಕಾಗಿ ಆಕಾಶವನ್ನಡರುತ್ತದೆ. ಮಾವಿನ ಮರದ ಕೊಂಬೆಗಳನ್ನು ಕಡಿದರೂ ಅದು ಚೆನ್ನಾಗಿ ಚಿಗುರಿ ಹೊಂಬಣ್ಣದ ಎಲೆಗಳನ್ನು ಚಿಗುರಿಸುತ್ತದೆ. ತೇಜಸ್ವಿಯಾದ ಶ್ರೀಧರನಿಗೆ ಈ ಕಷ್ಟಗಳಿಂದ ಉತ್ಸಾಹ ಕುಂದಲಿಲ್ಲ. ಬುದ್ಧಿ ಅಡ್ಡದಾರಿಗೆ ತಿರುಗಲಿಲ್ಲ. ವಿದ್ಯಾಭ್ಯಾಸ ಮಾಡಬೇಕೆಂಬ ತವಕ ಇಮ್ಮಡಿಸಿತು. ಅಧ್ಯಾತ್ಮ ಮಾರ್ಗದ ಇನ್ನೊಂದು ಮೆಟ್ಟಿಲನ್ನು ಅವನು ಹತ್ತಿದನು. ಬಾಲ್ಯದಲ್ಲಿ ಒದಗಿದ ನಾನಾಬಗೆಯ ಕಷ್ಟಗಳೇ ಶ್ರೀಧರಸ್ವಾಮಿಗಳು ಸಂನ್ಯಾಸಿಗಳಾಗಲು ಕಾರಣವೆಂದು ಯಾರಾದರೂ ಹೇಳಿಯಾರು. ಆದರೆ ಈ ಮಾತಿನಲ್ಲಿ ಹುರುಳಿಲ್ಲ. ಶ್ರೀಧರರ ಸ್ವಭಾವವೇ ಹುಟ್ಟಿದಂದಿನಿಂದ ವೇದಾಂತದ ಕಡೆಗೆ ಒಲಿದಿತ್ತು. ಇದುವರೆಗೆ ತಿಳಿಸಿದ ಅವರ ನಡತೆಯಿಂದಲೂ ಮುಂದಿನ ಚರಿತದಿಂದಲೂ ಇದು ಸ್ಪಷ್ಟವಾಗುತ್ತದೆ.

ಗುಲ್ಬರ್ಗದಲ್ಲಿ ಶ್ರೀಧರನ ಚಿಕ್ಕಮ್ಮ ಇದ್ದಳು. ಆಕೆಯ ಅಪೇಕ್ಷೆಯಂತೆ ಈತನು ಅವರ ಮನೆಯಲ್ಲಿದ್ದು ಪ್ರಾಥಮಿಕ ಆರನೆಯ ತರಗತಿಗೆ ಸೇರಿ ವಿದ್ಯಾಭ್ಯಾಸವನ್ನು ಮುಂದುವರಿಸಿದನು. ತನ್ನ ಸಂಧ್ಯಾವಂದನೆ–ಜಪ – ಸತ್ಸಂಗಗಳಸಂಬಂಧ – ಇವನ್ನು ಅವನು ತ್ಯಜಿಸಲೇ ಇಲ್ಲ. ಅವುಗಳಲ್ಲಿ ಆಸಕ್ತಿ ದಿನೇ ದಿನೇ ಹೆಚ್ಚುತ್ತಲೇ ಹೋಯಿತು. ಗುಲ್ಬರ್ಗದಲ್ಲಿ ನಡೆಯುತ್ತಿದ್ದ ಶ್ರೀಮಧ್ವನವಮೀ, ಶ್ರೀ ಶಂಕರ ಜಯಂತೀ ಮೊದಲಾದ

ಉತ್ಸವಗಳಲ್ಲಿ ಈತನು ಸ್ವಯಂ ಸೇವಕನಾಗಿ ಸೇರಿ ಎಲ್ಲಿಲ್ಲದ ಉತ್ಸಾಹದಿಂದ ದುಡಿಯುತ್ತಿದ್ದನು. ಒಂದು ಸಲ ಶ್ರೀ ಶಂಕರ ಜಯಂತೀ ಉತ್ಸವದ ಸಂದರ್ಭದಲ್ಲಿ "ಶ್ರೀ ಶಂಕರ ಭಾಷ್ಯ ಗ್ರಂಥಗಳು" ಎಂಬ ವಿಷಯವಾಗಿ ಒಬ್ಬ ಪಂಡಿತರಿಂದ ಪ್ರವಚನಗಳು ನಡೆದವು. ಆ ಪ್ರವಚನಗಳನ್ನು ಕೇಳಿದ ಶ್ರೀಧರನ ಮನಸ್ಸಿನ ಮೇಲೆ ಅಧಿಕವಾದ ಪ್ರಭಾವ ಮೂಡಿತು. ಶಂಕರಾಚಾರ್ಯರ ಅದ್ವೈತ ವೇದಾಂತದ ಕಡೆಗೆ ಮನಸ್ಸು ಒಲಿಯಿತು. ಮನೆಯಲ್ಲಿ ಚಿಕ್ಕಮ್ಮನು ಭಗವದ್ಗೀತೆಯನ್ನು ಕಲಿಸಿದಳು. ತಾನು ವೇದಾಂತದಲ್ಲಿ ಪಾರಂಗತನಾಗಿ ಅದನ್ನು ಪ್ರಚಾರ ಮಾಡಬೇಕೆಂಬ ಸಂಕಲ್ಪ ತಲೆದೋರಿತು. ಶ್ರೀಧರನ ವೇದಾಧ್ಯಯನ ಮತ್ತು ಸಂಸ್ಕೃತ ಭಾಷೆಯ ಅಭ್ಯಾಸ ಎಲ್ಲಿ ನಡೆಯಿತೆಂಬುದಕ್ಕೆ ನಮಗೆ ಸರಿಯಾದ ದಾಖಲೆ ಸಿಗುವುದಿಲ್ಲ. ಬಹುಶಃ ತನ್ನ ಶಾಲೆಯ ವಿದ್ಯಾಭ್ಯಾಸದ ಜೊತೆಗೆ ಖಾಸಗಿಯಾಗಿ ಇವುಗಳ ಅಭ್ಯಾಸವನ್ನು ಆತನು ಮಾಡಿರಬೇಕು.

ಕ್ರಿ. ಶ. 1923ನೆಯ ವರ್ಷ ಬಂದಿತು. ಶ್ರೀಧರನಿಗೆ ಹದಿನೈದು ವರ್ಷಗಳಾಗಿದ್ದವು. ವಿದ್ಯಾಭ್ಯಾಸದ ಜೊತೆಗೆ ತಪಸ್ಸು ಮಾಡಬೇಕೆಂಬ ಆಸೆ ಅವನಲ್ಲಿ ಪ್ರಬಲಿಸಿತು. ಚಿಕ್ಕಮ್ಮನ ಮನೆಯಲ್ಲಿ ಇದಕ್ಕೆ ಸೌಕರ್ಯವಾಗುವುದಿಲ್ಲವೆಂದೂ ಯಾವ ಬಂಧುಗಳೂ ಇಲ್ಲದ ಸ್ವತಂತ್ರವಾದ ಸ್ಥಳಕ್ಕೆ ತಾನು ಹೋಗಬೇಕೆಂದೂ ಶ್ರೀಧರನ ಬಯಕೆಯಾಗಿತ್ತು. ಗುಲ್ಬರ್ಗದಲ್ಲಿದ್ದ ಒಬ್ಬ ಮಹನೀಯರು ಪುಣೆಯಲ್ಲಿ ಒಂದು ಅನಾಥ ವಿದ್ಯಾರ್ಥಿ ಗೃಹವಿದೆಯೆಂದೂ ಅಲ್ಲಿಗೆ ಹೋಗುವುದಾದರೆ ಸಹಾಯ ಮಾಡುವೆನೆಂದೂ ಹೇಳಿದರು. ಅದರಂತೆಯೇ ಆ ವಿದ್ಯಾರ್ಥಿಗೃಹದ ಸಂಚಾಲಕರಾದ ಶ್ರೀಕೇತಕರರೆಂಬವರಿಗೆ ಒಂದು ಪತ್ರವನ್ನು ಬರೆದು ಶ್ರೀಧರನಿಗೆ ಕೊಟ್ಟರು. ಒಡನೆಯೇ ಶ್ರೀಧರನು ಚಿಕ್ಕಮ್ಮನ ಒಪ್ಪಿಗೆಯನ್ನು ಪಡೆದು ಪುಣೆಗೆ

ಹೋದನು. ಅನಾಥ ವಿದ್ಯಾರ್ಥಿ ಗೃಹದಲ್ಲಿ ಪ್ರವೇಶ ಸಿಕ್ಕಿತು. ಶ್ರೀಧರನು ಅಲ್ಲಿದ್ದು ಆ ಸಂಸ್ಥೆಯ ಪ್ರೌಢಶಾಲೆಯಲ್ಲಿ ವಿದ್ಯಾಭ್ಯಾಸವನ್ನು ಮುಂದುವರಿಸಿದನು.

ಆ ವಿದ್ಯಾರ್ಥಿನಿಲಯವು ಲೋಕಮಾನ್ಯ ಬಾಲಗಂಗಾಧರ ತಿಲಕರಿಂದ ಸ್ಥಾಪಿತವಾಗಿತ್ತು. ಆ ಕಟ್ಟಡದ ಒಂದು ಸ್ಥಳದಲ್ಲಿ "ಈ ಸಂಸ್ಥೆಯ ಉದ್ದೇಶಕ್ಕೆ ಅನುಗುಣವಾಗಿ ಒಬ್ಬ ವಿದ್ಯಾರ್ಥಿ ಸಿದ್ಧನಾಗಿ ಹೊರಟರೆ, ಅವನು ಜಗತ್ತಿನ ನಾಯಕತ್ವವನ್ನೇ ವಹಿಸುವನು" ಎಂದು ದಪ್ಪಕ್ಷರಗಳಲ್ಲಿ ಬರೆಸಿದ್ದರು. ಶ್ರೀಧರನಿಗೆ ಅದನ್ನೋದಿ ರೋಮಾಂಚನವಾಯಿತು. ಆ ಮಾತು ಆತನನ್ನು ವಿಶೇಷವಾಗಿ ಆಕರ್ಷಿಸಿತು. ಅಲ್ಲಿಯ ನಿಯಮಪಾಲನೆ, ಶಿಕ್ಷಣಕ್ರಮಗಳು ಮನಸ್ಸಿಗೆ ಹಿಡಿಸಿದವು. ಸ್ವಲ್ಪ ದಿನಗಳಲ್ಲಿಯೇ ಅವನು ಎಲ್ಲರ ಪ್ರೀತಿಗೆ ಪಾತ್ರನಾದನು. ವ್ಯಾಯಾಮ ಕಾಲದಲ್ಲಿ ವಿದ್ಯಾರ್ಥಿಗಳನ್ನು ಶಿಸ್ತಿನಲ್ಲಿಡುವ ನಾಯಕನಾದನು. ವಿದ್ಯಾರ್ಥಿ ನಿಲಯದಲ್ಲಿ ಯಾರಿಗೆ ಅನಾರೋಗ್ಯವಾದರೂ ಅವರನ್ನು ಉಪಚರಿಸುವುದು ಶ್ರೀಧರನ ಕರ್ತವ್ಯವಾಯಿತು. ಅವನು ತಾನಾಗಿಯೇ ಎಲ್ಲರಿಗೆ ಬೇಕಾದ ಸ್ವಯಂಸೇವಕನಾದನು. ತನ್ನ ಜಪ, ತಪಗಳನ್ನು ಮಾತ್ರ ದಿನದಿನಕ್ಕೆ ಹೆಚ್ಚಿಸುತ್ತ ಹೋದನು. ಈತನ ಆಚಾರವನ್ನೂ ಸ್ನೇಹಭಾವವನ್ನೂ ಕಂಡು ಎಲ್ಲರೂ ಪ್ರೀತಿಯಿಂದ "ಶ್ರೀಧರಸ್ವಾಮಿ" ಎಂದು ಕರೆಯಲಾರಂಭಿಸಿದರು.

ಪ್ರೌಢಶಾಲೆಯಲ್ಲಿ ಒಂದು ದಿನ ತರಗತಿಯ ಉಪಾಧ್ಯಾಯರು ವಿದ್ಯಾರ್ಥಿಗಳನ್ನು ಕುರಿತು "ನಿಮ್ಮ ಜೀವನದ ಗುರಿಯೇನು? ಆಸೆಯೇನು? – ಎಂಬುದನ್ನು ಕಾಗದದಲ್ಲಿ ಬರೆದುಕೊಡಿರಿ" ಎಂದು ತಿಳಿಸಿದರು. ಆಗ ಕೆಲವು ವಿದ್ಯಾರ್ಥಿಗಳು ತಾವು ಡಾಕ್ಟರಾಗಬೇಕೆಂದೂ, ಕೆಲವರು ಇಂಜಿನಿಯರ್ ಆಗಬೇಕೆಂದೂ, ಕೆಲವರು ದೊಡ್ಡ

ನೌಕರರಾಗಬೇಕೆಂದೂ ತಮ್ಮ ತಮ್ಮ ಆಸೆಗಳನ್ನು ಬರೆದುಕೊಟ್ಟರು. ಶ್ರೀಧರನು ಬರೆದುಕೊಟ್ಟ ಕಾಗದದಲ್ಲಿ ಹೀಗಿತ್ತು:

**"To obtain complete grace of God and serve the mankind is the goal of my life."**

"ಪರಮಾತ್ಮನ ಸಂಪೂರ್ಣ ಕೃಪೆಯನ್ನು ಪಡೆಯುವುದು ಮತ್ತು ಜನತಾ ಸೇವೆಯನ್ನು ಮಾಡುವುದು ನನ್ನ ಜೀವನದ ಗುರಿ!"

ಈ ತರುಣನ ಗುರಿ ಏನೆಂಬುದು ಆಗಲೇ ನಿಚ್ಚಳವಾಗಿತ್ತು. ಶ್ರೀಧರ ಸ್ವಾಮಿಗಳ ಜೀವನವು ಕಡೆಯವರೆಗೂ ಈ ಗುರಿಯಲ್ಲಿಯೇ ಸಾಗಿತು. ಕಿಂಚಿತ್ತಾದರೂ ಅಳುಕಲಿಲ್ಲ. ಅಷ್ಟು ಚಿಕ್ಕ ವಯಸ್ಸಿನಲ್ಲಿ ಅಂತಹ ಜೀವನದ ಗುರಿ ಬರಬೇಕಾದರೆ ಮನಸ್ಸಿನ ಪರಿಪಾಕ ಯಾವ ಮಟ್ಟಕ್ಕೆ ಬಂದಿತ್ತೆಂಬುದನ್ನು ಊಹಿಸಿಕೊಳ್ಳಬಹುದು.

ಶ್ರೀಧರನಿಗೆ ತಪಸ್ಸಿನ ಗೀಳು ಮೊದಲಿಂದಲೂ ಇದ್ದಿತಷ್ಟೆ. ಅದು ದಿನೇ ದಿನೇ ಹೆಚ್ಚುತ್ತಲಿತ್ತು. ತಾನಿದ್ದ ವಿದ್ಯಾರ್ಥಿ ನಿಲಯದ ಕೆಲವು ನಿಯಮಗಳಿಂದ ತಪಸ್ಸಿಗೆ ಹೆಚ್ಚು ಕಾಲ ದೊರೆಯುತ್ತಿರಲಿಲ್ಲ. ಅವನ ತಪಸ್ಸೆಂದರೆ ಶ್ರೀರಾಮನಾಮವನ್ನು ಅಥವಾ ಶ್ರೀ ದತ್ತನಾಮವನ್ನು ಜಪಿಸುತ್ತ ಏಕಾಂತದಲ್ಲಿ ದೀರ್ಘಕಾಲ ಕುಳಿತುಕೊಳ್ಳುವುದು. ಆತನ ಧ್ಯೇಯವೇ ತಪಸ್ಸಾಗಿತ್ತು. ಹೀಗಿರಲು ತಾನಿದ್ದ ಸಂಸ್ಥೆಯನ್ನು ಬಿಟ್ಟು ವಾಸಕ್ಕೆ ಒಂದು ಬಾಡಿಗೆಯ ಕೊಠಡಿಯನ್ನು ಗೊತ್ತು ಮಾಡಿಕೊಂಡು ಬೇರೊಂದು ಶಾಲೆಗೆ ಸೇರಿದನು. ಬಾಡಿಗೆಯ ಕೊಠಡಿಯಲ್ಲಿ ದಿನಕ್ಕೆ ಕೆಲವು ಘಂಟೆಗಳ ಕಾಲ ವಿದ್ಯಾಭ್ಯಾಸ ಮಾಡುತ್ತಿದ್ದನು. ಆಹಾರಕ್ಕಾಗಿ ಮಧುಕರೀವೃತ್ತಿಯನ್ನು ಅವಲಂಬಿಸಿದನು. ಮಧುಕರಿಯೆಂದರೆ ಬಿಕ್ಷಾನ್ನ. ಮಧುಕರಿಯೆಂಬ ಹೆಸರು ಪುಣೆಯಲ್ಲಿ ರೂಢಿಯಲ್ಲಿತ್ತು. ತನ್ನ ಶುದ್ಧವಾದ ನಡತೆ–ನಯ–ವಿನಯಗಳಿಂದ ಆ ಬೀದಿಯ ಎಲ್ಲ ಮನೆಯವರಿಗೂ

ಬೇಕಾದವನಾದ್ದರಿಂದ ಶ್ರೀಧರನಿಗೆ ಭಿಕ್ಷಾನ್ನ ಯಥೇಚ್ಛವಾಗಿ ದೊರಕುತ್ತಿತ್ತು. ಹೆಚ್ಚೆನಿಸಿದ ಭಿಕ್ಷಾನ್ನವನ್ನು ಜೊತೆಯ ಬಡ ವಿದ್ಯಾರ್ಥಿಗಳಿಗೆ ಹಂಚಿಬಿಡುತ್ತಿದ್ದನು. ತನ್ನಲ್ಲುಳಿದ ಅಲ್ಪಸ್ವಲ್ಪ ಹಣದಿಂದ ಪುಸ್ತಕವಿಲ್ಲದ ಹುಡುಗರಿಗೆ ಪುಸ್ತಕಗಳನ್ನು ಕೊಡಿಸುತ್ತಿದ್ದನು. ಒಂದು ಸಲ ಕುಲಕರ್ಣಿ ಎಂಬ ವಿದ್ಯಾರ್ಥಿ ಶ್ರೀಧರನ ಬಳಿಗೆ ಬಂದು "ಈ ವರ್ಷ ನನ್ನಲ್ಲಿ ತರಗತಿಯ ಪುಸ್ತಕಗಳಿಲ್ಲ. ನೀವೇನಾದರೂ ಸಹಾಯ ಮಾಡಿದರೆ ಪರೀಕ್ಷೆಗೆ ಹೋಗುತ್ತೇನೆ, ಇಲ್ಲವಾದರೆ ದೇವರೇ ಗತಿ" ಎಂದು ನಿಟ್ಟುಸಿರು ಬಿಟ್ಟನಂತೆ. ಆಗ ಶ್ರೀಧರನ ಬಳಿ ಹಣ ಇರಲಿಲ್ಲ. ಅವನಿಗೆ ಮರುಕ ಉಕ್ಕಿ ತನ್ನ ಎಲ್ಲ ಪುಸ್ತಕಗಳನ್ನೂ ಆತನಿಗೆ ಕೊಟ್ಟುಬಿಟ್ಟನು. ತಾನು ಆ ವರ್ಷ ಪರೀಕ್ಷೆಗೆ ಕುಳಿತುಕೊಳ್ಳಲಿಲ್ಲ. ಕುಲಕರ್ಣಿಯ ಪರೀಕ್ಷೆಯ ಶುಲ್ಕವನ್ನೂ ತಾನೇ ಕಟ್ಟಿದನು! ಈ ಬಗೆಯ ಪರೋಪಕಾರ ಸ್ವಭಾವದಿಂದ ಶ್ರೀಧರನ ವಿದ್ಯಾಭ್ಯಾಸ ಹಿಂದೆ ಬಿದ್ದಿತು. ತಪಸ್ಸಿನ ಯತ್ನ ಮಾತ್ರ ಮುಂದುವರಿದಿತ್ತು.

ಶ್ರೀಧರನಿಗೆ ಧರ್ಮದ ವಿಷಯದಲ್ಲಿ ಬಹಳ ಆದರವಿತ್ತು. ಸನಾತನವಾದ ವೈದಿಕ ಸಂಸ್ಕೃತಿಯೇ ಜಗತ್ತಿನಲ್ಲಿ ಶ್ರೇಷ್ಠವಾದದ್ದೆಂದು ಅವನು ತಿಳಿದಿದ್ದನು. ಇಂತಹ ವೈದಿಕ ಸಂಸ್ಕೃತಿಯನ್ನು ಬಿಡುವುದೆಂದರೆ ದೈವಯೋಗದಿಂದ ಸಿಕ್ಕಿದ ಅಮೂಲ್ಯ ನಿಧಿಯನ್ನೇ ಕಳೆದುಕೊಂಡಂತೆ ಎಂದು ಆತನು ಭಾವಿಸಿದ್ದನು. ಧರ್ಮ, ನೀತಿ, ದೇಶಭಕ್ತಿ, ಈಶ್ವರಭಕ್ತಿ, ತತ್ವಜ್ಞಾನ – ಇವುಗಳ ವಿಷಯವಾಗಿ ದೊಡ್ಡವರೊಡನೆ ಚರ್ಚೆ ಮಾಡುತ್ತಿದ್ದನು. ಈ ತರುಣನ ಮನೋಭಾವವನ್ನೂ ವಿಚಾರಶಕ್ತಿಯನ್ನೂ ಕಂಡು ಹಿರಿಯರೂ ಬೆರಗಾಗುತ್ತಿದ್ದರು. ತಾನು ಇಂಗ್ಲೀಷ್ ಭಾಷೆಯನ್ನು ಕಲಿಯುತ್ತಿದ್ದರೂ ತಲೆಯಲ್ಲಿ ಕ್ರಾಪನ್ನು ಬಿಡದೆ ಶಿಖೆಯನ್ನು ಇಟ್ಟುಕೊಂಡಿದ್ದನು. ಆಂಗ್ಲ ಸಂಸ್ಕೃತಿಯ ಉಡಿಗೆ ತೊಡಿಗೆಗಳು ಅವನ ಮೇಲೆ ಯಾವ ಪರಿಣಾಮವನ್ನೂ ಬೀರಲಿಲ್ಲ. ನಿಯಮ ಪಾಲನೆಯಲ್ಲಿ

ಉಚ್ಚ–ನೀಚ ಭಾವವಿರಬಾರದೆಂದೂ, ನಿಯಮವು ಎಲ್ಲರಿಗೂ ಸಮವಾಗಿ ಅನ್ವಯಿಸುತ್ತದೆಯೆಂದೂ ಅವನು ಹೇಳುತ್ತಿದ್ದನು.

ವಿದ್ಯಾರ್ಥಿ ದೆಸೆಯಲ್ಲಿಯೇ ಶ್ರೀಧರನ ಜೀವನಕ್ರಮ ಋಷಿಸಮಾನವಾಗಿತ್ತು. ಬೆಳಗಿನ ಜಾವದಲ್ಲಿ ನಾಲ್ಕು ಗಂಟೆಗೆ ಎದ್ದು ಗೋಮಯ – ಮೃತ್ತಿಕೆಗಳನ್ನು ಬಳಸಿ ತಣ್ಣೀರಲ್ಲಿ ಸ್ನಾನ ಮಾಡಿ ಗಾಯತ್ರಿ ಜಪ ಮಾಡುತ್ತ ಕುಳಿತಿರುತ್ತಿದ್ದನು. ಸೂರ್ಯೋದಯವಾದೊಡನೆ ಸೂರ್ಯನಮಸ್ಕಾರಗಳನ್ನು ಮಾಡಿ ಶ್ರೀರಾಮ ಪೂಜೆಯನ್ನು ಮುಗಿಸಿ ಶಾಲೆಯ ಪಾಠಗಳನ್ನು ಅಭ್ಯಾಸ ಮಾಡುತ್ತಿದ್ದನು. ಆಮೇಲೆ ಮತ್ತೆ ಸ್ನಾನಮಾಡಿ ಮಾಧ್ಯಾಹ್ನಿಕವನ್ನು ಮುಗಿಸಿ ಭಿಕ್ಷಾನ್ನಕ್ಕೆ ತೆರಳುತ್ತಿದ್ದನು. ಭಗವದ್ಗೀತೆ ಕಂಠಪಾಠವಾಗಿತ್ತು. ಭಿಕ್ಷಾನ್ನಕ್ಕೆ ಹೋದಾಗ ಕಂಠಪಾಠವಾದ ಭಗವದ್ಗೀತೆಯ ಹದಿನೆಂಟು ಅಧ್ಯಾಯಗಳ ಪಾರಾಯಣವೂ ಸಾಗುತ್ತಿತ್ತು. ತಂದ ಭಿಕ್ಷಾನ್ನದಲ್ಲಿ ಒಂದು ಭಾಗವನ್ನು ಗೋವಿಗೆ ಕೊಟ್ಟು ಉಳಿದದ್ದನ್ನು ಸೇವಿಸಿ ಶಾಲೆಗೆ ಹೋಗುತ್ತಿದ್ದನು. ಸಂಜೆ ಮತ್ತೆ ಸ್ನಾನ ಮಾಡಿ ಸಾಯಂಕಾಲದ ಸಂಧ್ಯಾವಂದನೆಯನ್ನು ಮಾಡಿ ಧ್ಯಾನಕ್ಕೆ ಕುಳಿತುಕೊಳ್ಳುತ್ತಿದ್ದನು. ರಾತ್ರಿ ಅಲ್ಪಾಹಾರವನ್ನು ಸೇವಿಸಿ ಶಾಲೆಯ ಪಾಠಗಳನ್ನು ಓದಿ ಮಲಗುತ್ತಿದ್ದನು.

ಕೆಲವು ದಿನಗಳ ಮೇಲೆ ರಾತ್ರಿಯ ಅಲ್ಪಾಹಾರವನ್ನೂ ತ್ಯಜಿಸಿದನು. ಸಂಜೆ ಮಾರುತಿಯ ಮುಂದಿರಕ್ಕೆ ಹೋಗಿ ಸ್ತೋತ್ರಗಳನ್ನು ಹೇಳಿಕೊಳ್ಳುತ್ತ ಆಂಜನೇಯ ಸ್ವಾಮಿಗೆ ನೂರೆಂಟು ಪ್ರದಕ್ಷಿಣೆಗಳನ್ನು ಹಾಕಿ ನಮಸ್ಕರಿಸುತ್ತಿದ್ದನು. ಸುತ್ತಮುತ್ತಲಿನ ಜನರಿಗೆ ಈ ತರುಣನ ದಿನಚರಿಯನ್ನೂ, ಸಾಧು ಸ್ವಭಾವವನ್ನೂ, ದೈವಭಕ್ತಿಯನ್ನೂ ಕಂಡು ಅಚ್ಚರಿ. ಈತನು ಕಲಿಯುಗದ ಮನಷ್ಯನಲ್ಲ ಎಂದುಕೊಳ್ಳುತ್ತಿದ್ದರು. ನೆರೆಯಲ್ಲಿ ಪಳಣಿಟಕರರೆಂಬ ಒಬ್ಬ ಮಹನೀಯರಿದ್ದರು. ಶ್ರೀಧರನು

ಹಲವು ವೇಳೆ ಅವರ ಮನೆಗೆ ಹೋಗಿ ಪಾರಮಾರ್ಥಿಕ ವಿಷಯವನ್ನು ಚರ್ಚಿಸುತ್ತಿದ್ದನು. ಪ್ರಾಚೀನಕಾಲದ ಋಷಿಗಳ ವಿಷಯವನ್ನು ಕೇಳುತ್ತ ಅವರಿಗೆ ಸಂಬಂಧಿಸಿದ ಪುಸ್ತಕಗಳನ್ನು ಓದುತ್ತ ಹೋದಂತೆ, ಆ ಋಷಿಗಳ ಹಾಗೆ ತಾನೂ ತಪಸ್ಸು ಮಾಡಬೇಕೆಂಬ ಇಚ್ಛೆ ಪ್ರಬಲವಾಗುತ್ತ ಬಂದಿತು. ಈ ವಿಚಾರವನ್ನು ಶ್ರೀಧರನು ಪಳಣಿಟಕರರಿಗೆ ತಿಳಿಸಿದನು. ಅವರು "ಅದು ಉತ್ತಮವೇನೋ ಸರಿ. ಆದರೆ ಬಹಳ ಕಠಿಣವಾದ ದಾರಿ. ಬಹಳ ಜನರು ಅದಕ್ಕಾಗಿ ಯತ್ನಿಸಿ ಸೋತಿದ್ದಾರೆ. ಅಲ್ಲಾಡದಂತಹ ಮನಸ್ಸಿನ ಸ್ಥಿರತೆ ಬೇಕಾಗುತ್ತದೆ" ಎಂದು ಹೇಳಿದರು. ಅಂತಹ ಸ್ಥಿತಿಯನ್ನು ತಾನು ಉಳಿಸಿಕೊಳ್ಳಬಲ್ಲೆನೆಂದು ಶ್ರೀಧರನಿಗೆ ಆತ್ಮ ವಿಶ್ವಾಸವಿತ್ತು.

ಆ ಸಮಯದಲ್ಲಿ ಪುಣೆಗೆ ಬಂದು ಹೋಗುವ ವಿದ್ವಾಂಸರನ್ನು ಶ್ರೀಧರನು ಕಂಡು ವೇದಾಂತ, ತಪಸ್ಸು ಇವುಗಳ ವಿಷಯವಾಗಿ ಮಾತಾಡುತ್ತಿದ್ದನು. ಅವರಲ್ಲಿ ಕೆಲವರು ಬರಿಯ ಮಾತುಗಾರರೆಂದೂ, ಶುದ್ಧವಾದ ಆಚಾರವಿಲ್ಲದವರೆಂದೂ ಅವನು ಗೊತ್ತುಪಡಿಸಿಕೊಂಡನು. ಇನ್ನು ಕೆಲವರು ನಿಜವಾಗಿಯೂ ಮಹಾತ್ಮರೇ ಆಗಿದ್ದರು. ಶ್ರೀಧರನು ಅಂಥವರೊಡನೆ ಹೆಚ್ಚಿನ ಸಹವಾಸವನ್ನು ಬೆಳೆಸಿ ಅವರ ಅನುಭವಗಳನ್ನೂ ವಿಚಾರಗಳನ್ನೂ ತಿಳಿದುಕೊಳ್ಳುತ್ತಿದ್ದನು. ಒಟ್ಟಿನಲ್ಲಿ ಹೆಂಡಿರು ಮಕ್ಕಳನ್ನು ಕಟ್ಟಿಕೊಂಡ ಸಂಸಾರಿಗಳಿಂದ ಹೆಚ್ಚಿನ ಜನಸೇವೆ ಸಾಧ್ಯವಿಲ್ಲವೆಂದೂ ಎಷ್ಟು ಯತ್ನಿಸಿದರೂ ಸ್ವಾರ್ಥವು ಅವರನ್ನು ಪೂರ್ಣವಾಗಿ ಬಿಡುವುದಿಲ್ಲವೆಂದೂ ಅವನು ನಿರ್ಧರಿಸಿಕೊಂಡನು. ಆದ್ದರಿಂದ ಸರ್ವವನ್ನೂ ತ್ಯಾಗಮಾಡಿದ ಸಂನ್ಯಾಸಿಗೆ ಮಾತ್ರ ಒಳ್ಳೆಯ ಕೆಲಸವನ್ನು ಮಾಡಲು ಸಾಧ್ಯವೆಂಬ ತೀರ್ಮಾನಕ್ಕೆ ಬಂದು ನಿಂತನು. ಎಲ್ಲವನ್ನೂ ತ್ಯಜಿಸಿ ತಪಸ್ಸಿಗೆ ಹೋಗಬೇಕೆಂಬ ಇಚ್ಛೆ ಪ್ರಬಲವಾಯಿತು. ಪ್ರೌಢಶಾಲೆಯ ವಿದ್ಯಾಭ್ಯಾಸ ಇನ್ನು ಸಾಕು ಎನ್ನಿಸಿತು.

ಶ್ರೀಧರನು ತನ್ನ ನಿರ್ಧಾರವನ್ನು ಆಪ್ತರಾದ ಪಳಣಿಟಕರರಿಗೆ

ತಿಳಿಸಿದನು. ಈ ತರುಣನ ಸ್ವಭಾವವನ್ನು ಚೆನ್ನಾಗಿ ಬಲ್ಲ ಆ ಮಹನೀಯರಿಂದ ಪ್ರೋತ್ಸಾಹವೇ ದೊರೆಯಿತು. ಶ್ರೀಧರನು ಕಡೆಗೆ ಈ ವಿಷಯವನ್ನು ತನ್ನ ಸ್ನೇಹಿತರಿಗೆ ತಿಳಿಸಿದನು. ಅವರು "ಶ್ರೀಧರ, ನೀನು ತಪಸ್ವಿಯಾಗಿ ಪರಮಹಂಸ ಪರಿವ್ರಾಜಕನಾಗಲಿದ್ದೀಯೆ. ಆಗ ನಮ್ಮನ್ನು ಮರೆತುಬಿಡುವೆ" ಎಂದು ಹಾಸ್ಯ ಮಾಡಿದರು. ಶ್ರೀಧರನು "ಮಿತ್ರರೇ, ನನ್ನ ಸಾವಿರ ಛಾಯಾಚಿತ್ರಗಳನ್ನು ತೆಗೆದು ಎದುರಿಗಿಟ್ಟರೆ ಅದು ನನ್ನದೇ ಛಾಯೆಯೆಂದೂ-ನನಗಿಂತ ಬೇರೆಯಲ್ಲವೆಂದೂ ತೋರುವುದು. ನಾನು ಎಲ್ಲಿ ಯಾವ ಪರಿಸ್ಥಿತಿಯಲ್ಲಿದ್ದರೂ ನನ್ನ ಸ್ವಭಾವ ಬದಲಾಗದು. ನೀವೆಲ್ಲರೂ ನನ್ನ ಛಾಯೆಗಳೆಂದೇ ತಿಳಿದಿದ್ದೇನೆ. ಜಗತ್ತಿನಲ್ಲಿರುವ ಸಕಲ ಮಾನವರೂ, ಪಶುಪಕ್ಷಿಗಳೂ ಭಗವಂತನ ಛಾಯೆಗಳೇ ಸರಿ" ಎಂದು ಉತ್ತರ ಹೇಳಿದನು. ಈ ಮಾತಿನ ಗೂಢವಾದ ಅರ್ಥ ಆ ಸ್ನೇಹಿತರಿಗೆ ಅರ್ಥವಾಯಿತೋ ಇಲ್ಲವೋ! ಎಲ್ಲರೂ ತಮ್ಮ ಪ್ರಿಯಮಿತ್ರನನ್ನು ಆತ್ಮೀಯತೆಯಿಂದ ಬೀಳ್ಕೊಟ್ಟರು.

ಆಶ್ವಯುಜ ಮಾಸದ ವಿಜಯದಶಮೀ ಬುಧವಾರ, ಶ್ರೀಧರನು ಎಂದಿನಂತೆ ನಸುಕಿನಲ್ಲೆದ್ದು, ಸ್ನಾನ ಅನುಷ್ಠಾನಗಳನ್ನು ಮುಗಿಸಿ, ಭಗವಂತನನ್ನು ಒಂದೇ ಮನಸ್ಸಿನಿಂದ ಧ್ಯಾನಿಸಿದನು. "ಈ ದಿನದಿಂದ **ನನ್ನ ದೇಹ ಸಂಪೂರ್ಣವಾಗಿ ಭಗವಂತನಿಗೇ ಅರ್ಪಿತವಾಗಲಿ"** ಎಂದುಕೊಂಡು ಒಂದು ಕಾಗದವನ್ನು ತೆಗೆದು ಅದರಲ್ಲಿ ಹೀಗೆ ಬರೆದನು.

1. **ಮರಣ ಪರ್ಯಂತ ಅಖಂಡ ಬ್ರಹ್ಮಚರ್ಯವನ್ನು ಪಾಲಿಸುತ್ತೇನೆ.**

2. **ಎಲ್ಲಿಯೂ ಮಠಾಧಿಪತಿಯಾಗಿ ಕುಳಿತುಕೊಳ್ಳುವುದಿಲ್ಲ.**

3. **ಇನ್ನು ಮೇಲೆ ಹಣವನ್ನು ಮುಟ್ಟುವುದಿಲ್ಲ. ಯಾರಾದರೂ ಒತ್ತಾಯದಿಂದ ಕೊಟ್ಟರೆ, ಅದನ್ನು ಪರೋಪಕಾರಕ್ಕಾಗಿಯೇ**

ಬಳಸುವೆನು.

4. ಬಡವರಿಗೂ ಕಷ್ಟದಲ್ಲಿದ್ದವರಿಗೂ ಸಾಧ್ಯವಾದಷ್ಟು ಸಹಾಯ ಮಾಡುವುದಕ್ಕಾಗಿಯೇ ನನ್ನ ದೇಹವು ಮೀಸಲಾಗಿರುವುದು.

5. ಸಕಲ ಸ್ತ್ರೀಯರನ್ನೂ ತಾಯಿಯೆಂದೇ ತಿಳಿದಿರುವೆನು.

6. ಸ್ತ್ರೀ ಪುರುಷರಲ್ಲಿ ಯಾವ ಭೇದವನ್ನೂ ಎಣಿಸದೆ ಎಲ್ಲರಿಗೂ ಸಮಾನವಾಗಿ ಸೇವೆಯನ್ನು ಸಲ್ಲಿಸುವೆನು.

7. ನನ್ನ ಸ್ವಂತದ ಅವಶ್ಯಕತೆಯನ್ನು ಕನಿಷ್ಠ ಮಿತಿಗೆ ಇಳಿಸಿ, ನನ್ನ ತನುಮನಗಳನ್ನು ಲೋಕಸೇವೆಗಾಗಿ ಅರ್ಪಿಸುವೆನು.

8. ಸರ್ವವಿಧದಲ್ಲಿಯೂ ಶ್ರಮಿಸಿ ಧರ್ಮದ ಅವನತಿಯನ್ನು ತಡೆಗಟ್ಟುವೆನು.

ಮೇಲ್ಕಂಡ ಉದ್ದೇಶಗಳು ಪೂರ್ಣವಾಗಲೆಂದು ನನ್ನ ದೇಹವನ್ನು ಭಗವಂತನಿಗೆ ಅರ್ಪಿಸಿದ್ದೇನೆ. ಈ ದೇಹದಿಂದ ನಡೆಯುವ ಕರ್ಮದ ಹೊಣೆಗಾರಿಕೆ ಭಗವಂತನಿಗೆ ಸೇರಿದ್ದು. ಈ ನನ್ನ ಪ್ರತಿಜ್ಞೆಗೆ ಧರ್ಮದೇವತೆಗಳೂ, ಋಷಿಗಳೂ, ಪೃಥ್ವಿ, ಜಲ, ಅಗ್ನಿ, ವಾಯು, ಆಕಾಶ ಎಂಬ ಪಂಚಭೂತಗಳೂ ಸಾಕ್ಷಿಗಳಾಗಿರಲಿ.

ಈ ಪ್ರತಿಜ್ಞಾ ಪತ್ರವನ್ನು ಬರೆದು ಶ್ರೀಧರನು ತನ್ನ ರುಜುವನ್ನು ಹಾಕಿದನು. ಅನಂತರ ಅಗ್ನಿಯನ್ನು ಪ್ರಜ್ವಲಿಸಿ "ಈ ಪ್ರತಿಜ್ಞಾಪತ್ರವನ್ನು ಅಗ್ನಿದೇವನು ಸ್ವೀಕರಿಸಿ ತನ್ನಲ್ಲಿ ಭದ್ರವಾಗಿ ಇಟ್ಟುಕೊಂಡಿರಲಿ" ಎಂದು ಹೇಳಿ ಆ ಪತ್ರವನ್ನು ಅಗ್ನಿಯಲ್ಲಿ ಹೋಮ ಮಾಡಿದನು.

ಈ ಸಂದರ್ಭದಲ್ಲಿ ನಡೆದ ಇನ್ನೊಂದು ವಿಷಯವನ್ನು ಇಲ್ಲಿ

ಸ್ಮರಿಸಿಕೊಳ್ಳಬಹುದಾಗಿದೆ ತಾನು ತಪಸ್ಸಿಗೆ ಹೋಗುವುದಾದರೆ ಯಾವ ಬಗೆಯ ಲೌಕಿಕವಾದ ಆಸೆಯನ್ನೂ ಇಟ್ಟುಕೊಂಡಿರಬಾರದು. ನಾಲಿಗೆಯ ಚಾಪಲ್ಯವನ್ನಂತೂ ಪೂರ್ತಿಯಾಗಿ ಬಿಟ್ಟಿರಬೇಕು ಎಂದು ಶ್ರೀಧರನು ನಿಶ್ಚಯಿಸಿಕೊಂಡಿದ್ದನು. ಆತನಿಗೆ ಹಾಲಿನಲ್ಲಿ ಮಾಡಿದ ಪೇಡಗಳನ್ನು (ದೂಧ್‌ಪೇಡ) ಕಂಡರೆ ಬಹಳ ಇಷ್ಟ. ಕೈಯಲ್ಲಿ ಹಣವಿದ್ದಾಗ ಯಥೇಚ್ಛವಾಗಿ ಅವನ್ನು ಕೊಂಡು ತಿಂದು ಬಿಡುತ್ತಿದ್ದನು. ಈ ಚಾಪಲ್ಯವನ್ನು ಗೆಲ್ಲುವುದು ಹೇಗೆ? ಎಂದು ಆಲೋಚಿಸುತ್ತ ಇರುವಾಗ ಅವನಿಗೆ ಒಂದು ಉಪಾಯ ಹೊಳೆಯಿತು. ಒಂದು ಸೇರು ಪೇಡವನ್ನು ತಂದು ಅದಕ್ಕೆ ಗೋಮಯ (ಹಸುವಿನ ಸಗಣಿ)ವನ್ನು ಸೇರಿಸಿ ಕಲಸಿ ತಿನ್ನಲಾರಂಭಿಸಿದನು! ವಾಕರಿಕೆ ಹುಟ್ಟಿ ಪೇಡದ ಆಸೆ ಮುಗಿದುಹೋಯಿತು. ಪೇಡವನ್ನು ನೆನೆಸಿಕೊಂಡಾಗ ಅಸಹ್ಯ ಭಾವನೆ ಬಂದು ಅದರ ಚಾಪಲ್ಯ ಕೊನೆಗೊಂಡಿತು. ಹೀಗೆ ಹಂತಹಂತವಾಗಿ ಮನಸ್ಸನ್ನು ಹತೋಟಿಗೆ ತಂದುಕೊಂಡನು. ಒಂದು ಕೈಯಲ್ಲಿ ಬೆಳ್ಳಿಯ ರೂಪಾಯಿಯನ್ನೂ ಇನ್ನೊಂದು ಕೈಯಲ್ಲಿ ಮಣ್ಣನ್ನೂ ಹಿಡಿದು "ಇವೆರಡೂ ಪೃಥ್ವಿ ಸಂಬಂಧದಿಂದ ಆದವು. ಎರಡೂ ಒಂದೇ" ಎಂದು ಹೇಳುತ್ತ ಅವೆರಡನ್ನೂ ನೀರಿಗೆ ಎಸೆದುಬಿಡುತ್ತಿದ್ದನು. ಹೀಗೆ ಹಣದ ವ್ಯಾಮೋಹವನ್ನು ತೊಲಗಿಸಿಕೊಂಡಿದ್ದನು.

ಶ್ರೀಧರನು ಯಾವ ದಿನ ತನ್ನ ಪ್ರತಿಜ್ಞಾಪತ್ರವನ್ನು ಅಗ್ನಿಯಲ್ಲಿ ಹೋಮ ಮಾಡಿದನೋ ಆ ದಿನ ಪುಣೆಯಿಂದ ಹೊರಟುಬಿಡಬೇಕೆಂದು ಗೊತ್ತಾಗಿತ್ತು. ಆ ದಿನ ಪಳಣಿಟಕರರು ಶ್ರೀಧರನನ್ನೂ ಅವನ ಮಿತ್ರರನ್ನೂ ತಮ್ಮ ಮನೆಗೆ ಊಟಕ್ಕೆ ಕರೆದರು. ಅವರೆಲ್ಲರೂ ಸೇರಿ ಮಾತನಾಡುತ್ತಿರುವಾಗ ಶ್ರೀಧರನಿಗೆ ಒಂದು ಆಲೋಚನೆ ಹುಟ್ಟಿತು. "ನನಗೆ ಗುರು ಯಾರು? ಗುರುಮುಖದಿಂದ ಉಪದೇಶವಾಗದೇ ಯಾವ ವಿದ್ಯೆಯೂ ಸಾಂಗವಾಗದು. ಅದರಲ್ಲಿಯೂ ತಪಶ್ಚರ್ಯ, ವೇದಾಂತದ ಅಧ್ಯಯನ – ಇವುಗಳಿಗೆ ಗುರುವಿನ ಉಪದೇಶವಿಲ್ಲದೆ

ಕೈಹಾಕಬಾರದು" ಎಂಬುದು ಅವನ ಆಲೋಚನೆ. ಈ ವಿಷಯವನ್ನು ಪಳಣಿಟಕರರೊಂದಿಗೆ ಹೇಳಿದಾಗ ಅವರು ಹೀಗೆಂದರು: "ಅಪ್ಪಾ ಶ್ರೀಧರ, ನೀನು ತಪಸ್ಸಿಗಾಗಿ ಸಜ್ಜನಗಡಕ್ಕೆ ಹೋಗು. ಅದು ಶ್ರೀ ಸಮರ್ಥ ರಾಮದಾಸ ಸ್ವಾಮಿಗಳ ದಿವ್ಯಕ್ಷೇತ್ರ. ಅಲ್ಲಿ ಶ್ರೀ ಸಮರ್ಥರಲ್ಲದೆ ಇನ್ನೊಬ್ಬ ಗುರು ಎಲ್ಲಿ ಬಂದಾನು? ಅವರನ್ನೇ ಸದ್ಗುರುವೆಂಬ ಭಾವನೆಯಿಂದ ಮುಂದುವರಿಯಬಹುದು. ಜ್ಞಾನಿಯಲ್ಲದವನು ಗುರುವೆನಿಸಲಾರ. ಈ ಕಾಲದಲ್ಲಿ ಜ್ಞಾನಿಯಾದ ಗುರುವನ್ನು ಹುಡುಕುವುದು ತುಂಬ ಕಷ್ಟ. ಆದ್ದರಿಂದ ಶ್ರೀ ಸಮರ್ಥ ರಾಮದಾಸರೇ ನಿನ್ನ ಗುರುಗಳೆಂದು ನಿಶ್ಚಯಿಸಿಕೊ. ಅವರು ಭೌತಿಕವಾಗಿ ಇಲ್ಲದೆ, ದೇಹವನ್ನು ಬಿಟ್ಟಿದ್ದರೂ ಅವರ ತೇಜಸ್ಸಿನ ಸಾನ್ನಿಧ್ಯವು ಸಜ್ಜನಗಡದಲ್ಲಿ ಸದಾ ಇರುತ್ತದೆ. ಅವರ ಭಾವಚಿತ್ರವನ್ನು ಪೂಜೆ ಮಾಡು. ಭಾವಚಿತ್ರದ ಎದುರಿಗೆ ತ್ರಯೋದಶಾಕ್ಷರೀ ಶ್ರೀರಾಮಮಂತ್ರವನ್ನು ಬರೆದಿಟ್ಟು, ಗುರುಗಳೇ ಉಪದೇಶಿಸಿದ್ದಾರೆಂಬ ಭಾವನೆಯಿಂದ ಅದನ್ನು ನೂರೆಂಟು ಬಾರಿ ಪಠಿಸು. ಅದೇ ಗುರುಗಳ ಉಪದೇಶ. ಹಿಂದೆ ಏಕಲವ್ಯನು ದ್ರೋಣಾಚಾರ್ಯರನ್ನು ಈ ಬಗೆಯಲ್ಲಿಯೇ ಗುರುಗಳೆಂದು ತಿಳಿದು ಧನುರ್ವಿದ್ಯೆಯನ್ನು ಕಲಿತಿದ್ದನು" ಎಂದು ತಿಳಿಸಿದರು. ಶ್ರೀಧರನಿಗೆ ಈ ಮಾತು ಒಪ್ಪಿಗೆಯಾಯಿತು. ಆ ವರ್ಷ ವಿಜಯದಶಮಿಯು ಬುಧವಾರ, ಗುರುವಾರ – ಎರಡು ದಿನಗಳಲ್ಲಿಯೂ ಬಂದಿತ್ತು. ಮಾರನೆಯ ದಿನ ಗುರುವಾರ ಶ್ರೀಧರನು ಸಜ್ಜನಗಡಕ್ಕೆ ಹೊರಡಬೇಕೆಂದು ಗೊತ್ತಾಯಿತು. ಪಳಣಿಟಕರರು "ಶ್ರೀಧರ, ಸಜ್ಜನಗಡದಲ್ಲಿ ನಿನ್ನ ತಪಸ್ಸು ದೃಢತೆಯಿಂದ ಮುಂದುವರಿಯಲಿ. ನಿನ್ನ ಸಾಧನೆಯು ಫಲಿಸಲೆಂದು ಶ್ರೀ ಸಮರ್ಥರನ್ನು ಪ್ರತಿದಿನವೂ ನಾನು ಪ್ರಾರ್ಥಿಸುತ್ತ ಇರುತ್ತೇನೆ. ಅಲ್ಲದೆ ನಿನ್ನ ಅಭೀಷ್ಟ ಸಿದ್ಧಿಸಲೆಂದು ಇಂದಿನಿಂದ ಹನ್ನೆರಡು ವರ್ಷಗಳವರೆಗೆ ನಾನು ಪರಾನ್ನವನ್ನು ಮುಟ್ಟುವುದಿಲ್ಲ" ಎಂದು ಹೇಳಿ ತಮ್ಮ ವಿಶ್ವಾಸದ ಸೂಚನೆಯಾಗಿ ಒಂದು ರೂಪಾಯಿಯನ್ನು ಶ್ರೀಧರನ

ಕೈಯಲ್ಲಿಟ್ಟರು. ಮಾರನೆಯ ದಿನ ಶ್ರೀಧರನು ಶ್ರೀ ಸಮರ್ಥರ ಧ್ಯಾನಮಾಡಿ, ನರಸಿಂಹ ದೇವಾಲಯಕ್ಕೆ ಹೋಗಿ, ಸ್ವಾಮಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಸಲ್ಲಿಸಿದನು. ಅನಂತರ ಹಿರಿಯರಿಗೆ ವಂದಿಸಿ ಮಿತ್ರರನ್ನು ಬೀಳ್ಕೊಂಡು ಶ್ರೀ ರಾಮಮಂತ್ರವನ್ನು ಜಪಿಸುತ್ತ ಸಜ್ಜನಗಡಕ್ಕೆ ಪ್ರಯಾಣ ಮಾಡಿದನು. ಅಂದು ಕ್ರಿ.ಶ. 1927 ನೆಯ ವರ್ಷದ ವಿಜಯದಶಮೀ ಗುರುವಾರ.

## ಸಾಧನೆ

ಲೌಕಿಕ ವಿದ್ಯಾಭ್ಯಾಸವನ್ನು ಕೈಬಿಟ್ಟು ಪರಮಾರ್ಥ ವಿದ್ಯೆಯ ಸಾಧನ ಮಾರ್ಗದಲ್ಲಿ ಶ್ರೀಧರರು ಕಾಲಿಟ್ಟರು. ಈ ಮಾರ್ಗದಲ್ಲಿ ಮನುಷ್ಯನಿಗೆ ಸತ್ತ್ವ ಶಕ್ತಿ ಅಧಿಕವಾಗಬೇಕು. ಪುಣೆಯಿಂದ ಹೊರಟ ದಿನವೇ ಶ್ರೀಧರರ ಸತ್ತ್ವ ಪರೀಕ್ಷೆ ನಡೆಯಿತು. ದಾರಿಯಲ್ಲಿ ಗುಡುಗು ಮಿಂಚುಗಳೊಡನೆ ಧಾರಾಕಾರವಾಗಿ ಮಳೆ ಸುರಿಯಲಾರಂಭಿಸಿತು. ಮಳೆಯಲ್ಲಿಯೇ ಶ್ರೀಧರರು ಸಾಗಿದರು. ಮಳೆಗಾಗಿ ಎಲ್ಲಿಯೂ ವಿಶ್ರಮಿಸಲಿಲ್ಲ. ತೊಯ್ದು ಒದ್ದೆಯಾಗಿ ಮೈಯಿಂದ ನೀರು ಹರಿಯುತ್ತಿತ್ತು. ಶ್ರೀರಾಮನಾಮವನ್ನು ಜಪಿಸುತ್ತ ಇವರು ದಾರಿ ಹಿಡಿದು ಹೋಗುತ್ತಲೇ ಇದ್ದರು. ಬಾಲ್ಯದಲ್ಲಿ ಚೆನ್ನಾಗಿ ವ್ಯಾಯಾಮ ಮಾಡುತ್ತಿದ್ದುದರಿಂದ ದೇಹ ಗಟ್ಟಿಮುಟ್ಟಾಗಿತ್ತು. ಹಸಿವು, ಬಾಯಾರಿಕೆ, ಚಳಿ, ಮಳೆ, ದಣಿವು– ಅವರಿಗೆ ಹೊಸದಾಗಿರಲಿಲ್ಲ. ಅವರು ಮೊದಲಿಗೆ ಹೋಗಿ ಸೇರಬೇಕಾದದ್ದು ಬನ್ನೇಶ್ವರದ ದೇವಾಲಯ. ಅದನ್ನು ಇವರು ಹಿಂದೆ ನೋಡಿರಲಿಲ್ಲ. ಪಳಣಿಟಕರರ ಹೇಳಿಕೆಯ ಮೇಲೆ ದಾರಿಯನ್ನು ಹಿಡಿದು ಸಾಗಿದ್ದರು. ಸಂಜೆಯಾಯಿತು. ರಾತ್ರಿಯಾಯಿತು. ಮಳೆಗಾಳಿಗಳ ರಭಸ ಇದ್ದೇ ಇತ್ತು. ಕಗ್ಗತ್ತಲಾಯಿತು. ಆಮೇಲೆ ಕೂಲಿಗಾರರ ಕೆಲವು ಗುಡಿಸಲು ಕಂಡವು. ಅಲ್ಲಿ ವಿಚಾರಿಸಿದಾಗ ಬನ್ನೇಶ್ವರದ ಕವಲುದಾರಿ ಐದು ಮೈಲುಗಳ ಹಿಂದೆಯೇ ಇದ್ದಿತೆಂದೂ, ಗೊತ್ತಾಗದೆ ತಾವು ಮುಂದೆ ಬಂದಿರುವುದಾಗಿಯೂ ತಿಳಿಯಿತು. ಆಗ ಮಧ್ಯರಾತ್ರಿಯಾದ್ದರಿಂದ ಅಲ್ಲಿಯೇ ಉಳಿದು ಬೆಳಗ್ಗೆ ಹೋಗಬಹುದೆಂದು

ಗುಡಿಸಲಿನವರು ಹೇಳಿದರು. ಶ್ರೀಧರರು ತಮ್ಮ ಗುರಿಯನ್ನು ಮುಟ್ಟುವವರೆಗೆ ನಿಲ್ಲತಕ್ಕವನಲ್ಲ ಎಂದು ಹೇಳಿ ಮತ್ತೆ ಐದು ಮೈಲಿ ಹಿಂದಕ್ಕೆ ನಡೆದರು. ಕಗ್ಗತ್ತಲಿನಲ್ಲಿ ತಮ್ಮ ದೇಹವೇ ತಮಗೆ ಕಾಣುತ್ತಿರಲಿಲ್ಲ!. "ಒಳ್ಳೆಯದು, ನನ್ನ ದೇಹವನ್ನೇ ಮರೆಯಲು ಕಲಿಯಬೇಕೆಂದು ಭಗವಂತನು ಸೂಚಿಸುತ್ತಿದ್ದಾನೆ" ಎಂದುಕೊಂಡು ಹೋಗಿ, ಕವಲುದಾರಿಯನ್ನು ಸೇರಿದರು. ಅಷ್ಟರಲ್ಲಿ ಮೋಡ ಹರಿದು ದಾರಿ ಕಾಣಿಸಿತು. ಕೆಲವು ದೂರ ಹೋದ ಮೇಲೆ ಒಂದು ಮಾರುತಿಯ ಗುಡಿ ಕಾಣಿಸಿತು. ಶ್ರೀಧರರು ಒಳಗೆ ಹೋಗಿ ಮಾರುತಿಗೆ ನಮಸ್ಕರಿಸಿ ಮುಂದೆ ಹೊರಟರು. ಅಲ್ಲಿ ಕೆಲವು ಮನೆಗಳು ಗೋಚರಿಸಿದವು. ಒಂದು ಮನೆಯ ಬಾಗಿಲಲ್ಲಿ ನಿಂತು ಶ್ರೀಧರರು ಮನೆಯ ಯಜಮಾನನನ್ನು ಕೂಗಿ "ಅಪ್ಪ, ಬನ್ನೇಶ್ವರ ದೇವಾಲಯದ ದಾರಿ ಯಾವುದು?" ಎಂದು ಕೇಳಿದರು. ಆ ಗೃಹಸ್ಥನು "ಈಗ ತುಂಬ ಕತ್ತಲಿದೆ, ಮುಂಜಾನೆ ಹೋಗಬಹುದಲ್ಲ" ಎಂದನು. "ಇಲ್ಲ, ಮುಂಜಾನೆಗೆ ನಾನು ಆ ದೇವಾಲಯವನ್ನು ಸೇರಿರಬೇಕು" ಎಂದು ಶ್ರೀಧರರು ಹೇಳುತ್ತಿರುವಾಗ ದೂರದಲ್ಲಿ ಒಂದು ಬೆಳಕು ಕಾಣಿಸಿತು. ಆ ಗೃಹಸ್ಥನು "ಸ್ವಾಮಿ, ಅದೋ ಆ ಬೆಳಕನ್ನು ಹಿಡಿದವರು ಬನ್ನೇಶ್ವರ ದೇವಾಲಯಕ್ಕೆ ಹೋಗುತ್ತಿದ್ದಾರೆ. ಪ್ರತಿದಿನ ಇಷ್ಟು ಹೊತ್ತಿಗೆ ಅನುಷ್ಠಾನಕ್ಕಾಗಿ ಹೋಗುತ್ತಾರೆ" ಎಂದನು. ಒಡನೆಯೇ ಶ್ರೀಧರರು ಓಡುತ್ತ ಹೋಗಿ ಆ ಬೆಳಕನ್ನು ಅನುಸರಿಸಿದರು.

ಬನ್ನೇಶ್ವರವು ಸುಂದರವಾದ ಒಂದು ಪವಿತ್ರ ಕ್ಷೇತ್ರ. ಅಲ್ಲಿರುವುದು ಶಿವ ದೇವಾಲಯ. ಸುತ್ತಲೂ ಎತ್ತರವಾದ ಮರಗಳು ಬೆಳೆದು ನಿಂತಿದ್ದವು. ಎದುರಿಗೆ ತಿಳಿನೀರಿರುವ ಪುಷ್ಕರಣಿ. ಶ್ರೀಧರರು ಅಲ್ಲಿಗೆ ತಲುಪುವಾಗ ಬೆಳಕು ಹರಿಯುತ್ತ ಬಂದಿತ್ತು. ಅವರು ಕೊಳದಲ್ಲಿ ಸ್ನಾನ ಮಾಡಿ ಹೂ, ಬಿಲ್ವಪತ್ರೆ, ತುಳಸಿಗಳನ್ನು ಸಂಗ್ರಹಿಸಿ ತಂದರು. ಬನ್ನೇಶ್ವರ

ಶಿವಲಿಂಗದ ಬಳಿ ಶ್ರೀಸಮರ್ಥ ರಾಮದಾಸರ ಪಟವನ್ನಿಟ್ಟು ಭಕ್ತಿಯಿಂದ ಪೂಜೆ ಮಾಡಿ ತಮ್ಮ ಅನುಷ್ಠಾನಕ್ಕೆ ಕುಳಿತರು. ಮಧ್ಯಾಹ್ನವಾಗಲು ಮಧುಕರಿಗಾಗಿ ಊರಿನಲ್ಲಿ ಹೊರಟರು. ಅಕಸ್ಮಾತ್ತಾಗಿ ಆ ಸ್ಥಳದ ತಹಸಿಲ್‌ದಾರರು ಇವರನ್ನು ಕಂಡು "ಈ ದಿನ ನಮ್ಮ ಮನೆಗೆ ಊಟಕ್ಕೆ ಬರಬೇಕು" ಎಂದು ಆಹ್ವಾನಿಸಿದರು. ಶ್ರೀಧರರು "ಕ್ಷಮಿಸಿ, ನಮಗೆ ಭಿಕ್ಷಾನ್ನವೇ ಪವಿತ್ರವಾದದ್ದು" ಎಂದು ನುಡಿದು ಮುಂದೆ ಸಾಗಿದರು. ಭಿಕ್ಷಾನ್ನವನ್ನು ತಂದು ಅದರ ಶುದ್ಧಿಗಾಗಿ ಕೊಳದ ನೀರಲ್ಲಿ ಒಮ್ಮೆ ಮುಳುಗಿಸಿ ತೆಗೆದರು. ಆನಂತರ ಶ್ರೀಸಮರ್ಥರಿಗೂ, ಶ್ರೀ ಶಂಕರನಿಗೂ ನೈವೇದ್ಯ ಮಾಡಿ ತಾವು ಆಹಾರವನ್ನು ಸ್ವೀಕರಿಸಿದರು. ಆಮೇಲೆ ಸ್ವಲ್ಪ ಹೊತ್ತು ವಿಶ್ರಮಿಸಿ, ಪಳಣಿಟಕರರು ಕೊಟ್ಟಿದ್ದ ಒಂದು ರೂಪಾಯಿಯನ್ನು ಅರ್ಚಕರಿಗೆ ಕೊಟ್ಟರು. ತರುವಾಯ ಬನ್ನೇಶ್ವರನಿಗೆ ನಮಸ್ಕರಿಸಿ ಸಜ್ಜನಗಡದ ದಾರಿಯನ್ನು ಹಿಡಿದರು.

ದಾರಿಯಲ್ಲಿ ಒಂದೇ ಸಮನಾಗಿ ಭಗವಂತನ ನಾಮ ಸ್ಮರಣೆ ನಡೆಯುತ್ತಿತ್ತು. ಶ್ರೀಧರರಿಗೆ ದಾರಿ ನಡೆದ ದಣಿವಾಗಲೀ, ಎಡಬಲದ ದೃಶ್ಯಗಳಾಗಲೀ ಗೋಚರಿಸಲೇ ಇಲ್ಲ. ನೀರು ಕಂಡಲ್ಲಿ ಸ್ನಾನಾಹ್ನಿಕಗಳನ್ನು ಮುಗಿಸುವುದು, ಸಂಜೆಯಾದಾಗ ಕಾಣಿಸಿದ ದೇವಾಲಯದಲ್ಲಿ ಮಲಗುವುದು, ಮಧ್ಯಾಹ್ನ ಭಿಕ್ಷಾನ್ನದಿಂದ ಹಸಿವಿನ ಬಾಧೆಯನ್ನು ನೀಗಿಕೊಳ್ಳುವುದು – ಹೀಗೆ ಪ್ರಯಾಣ ಮಾಡುತ್ತ ಶ್ರೀಧರರು ಸಾತಾರಾಪಟ್ಟಣವನ್ನು ಸೇರಿದರು. ಸಂಜೆಯಾಗಿತ್ತು. ಊರಿನ ಬಳಿ ಇದ್ದ ಮಾರುತಿ ಮಂದಿರದಲ್ಲಿ ಸ್ನಾನ ಸಂಧ್ಯೆಗಳನ್ನು ಮುಗಿಸಿ, ರಾತ್ರಿ ಅಲ್ಲಿಯೇ ತಂಗಿದ್ದು ಮರುದಿನ ಮುಂಜಾನೆ ಸಜ್ಜನಗಡದ ದಾರಿಯನ್ನು ಹಿಡಿದರು.

ಸಾತಾರಾದಿಂದ ಆರು ಮೈಲಿಗಳ ದೂರದಲ್ಲಿ ಸಜ್ಜನಗಡವಿದೆ.

ಸ್ವಲ್ಪ ದೂರ ಕ್ರಮಿಸುತ್ತಿರುವಾಗಲೇ ಶ್ರೀಧರರಿಗೆ ಸಜ್ಜನಗಿರಿ ಗೋಚರಿಸಿತು. ಅವರ ಬಾಯಿಂದ "ಜಯ ಜಯ ರಘುವೀರ ಸಮರ್ಥ" ಎಂಬ ಮಾತು ಥಟ್ಟನೆ ಹೊರಟಿತು. ಅವರ ದೇಹ ಆನಂದದಿಂದ ರೋಮಾಂಚನಗೊಂಡಿತು. ಅದೇ ಬಗೆಯಲ್ಲಿ ಘೋಷಣೆ ಮಾಡುತ್ತ ಶ್ರೀಧರರು ಬೇಗಬೇಗನೆ ಹೋದರು. ದಾರಿಯಲ್ಲಿ "ಊರ್ಮಡಿ" ಎಂಬ ನದಿ ಸಿಕ್ಕಿತು. ಅವರು ಅದರಲ್ಲಿ ಸ್ನಾನ ಮಾಡಿ ಆಹ್ನಿಕಗಳನ್ನು ಮುಗಿಸಿ ಧ್ಯಾನಾಸಕ್ತರಾದರು. ಧ್ಯಾನವು ಮುಗಿದ ಮೇಲೆ ಶ್ರೀಸಮರ್ಥರನ್ನು ಸ್ಮರಿಸುತ್ತ "ಪ್ರಭು, ಈ ಜಗತ್ತಿನಲ್ಲಿ ನನ್ನನ್ನು ರಕ್ಷಿಸತಕ್ಕವನು ನೀನೇ" ಎಂದರು. ಅವರ ಕಣ್ಣಲ್ಲಿ ನೀರು ಹರಿಯಿತು. ಅನಂತರ ಮೇಲೆದ್ದು ಜೊತೆಗೆ ತಂದಿದ್ದ ಕೈಚೀಲದ ಸಾಮಗ್ರಿಗಳನ್ನು ಅಲ್ಲಿಯೇ ಬಿಟ್ಟು ಒಂದು ಕೌಪೀನವನ್ನು ಮಾತ್ರ ಧರಿಸಿ ಸಜ್ಜನಗಡದ ಕಡೆಗೆ ಹೊರಟರು. ಗುರಿಯನ್ನು ಸೇರಿದ್ದಾಯಿತು. ಶ್ರೀಸಮರ್ಥಮಂದಿರದ ಸಮೀಪದಲ್ಲಿದ್ದ ಮಹಾಗಣಪತಿಯನ್ನು ಮೊದಲು ವಂದಿಸಿದರು. "ನನ್ನ ಗುರುಸೇವೆಗೆ ನಿರ್ವಿಘ್ನವನ್ನು ಉಂಟು ಮಾಡು" ಎಂದು ಪ್ರಾರ್ಥಿಸಿ, ಆಂಜನೇಯನ ದರ್ಶನವನ್ನು ಮಾಡಿ ಮುಂದೆ ಹೋದರು. ಮಂದಿರದಲ್ಲಿ ಶ್ರೀರಾಮ, ಸೀತಾ, ಲಕ್ಷ್ಮಣ ಮತ್ತು ಹನುಮಂತ – ಇವರ ವಿಗ್ರಹಗಳನ್ನು ಸ್ಥಾಪಿಸಲಾಗಿದೆ. ಅದಕ್ಕೆ ನೇರವಾಗಿ ಕೆಳಗಿರುವ ಗುಹೆಯಲ್ಲಿ ಶ್ರೀಸಮರ್ಥರ ಸಮಾಧಿ ಇದೆ. ಶ್ರೀಧರರು ನೇರವಾಗಿ ಗುಹೆಗೆ ಇಳಿದು ಹೋಗಿ ಶ್ರೀಸಮರ್ಥರ ಸಮಾಧಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ನಿಂತುಕೊಂಡರು. ಒಮ್ಮೆಗೇ ಅವರ ಮೈಮೇಲೆ ಕಾವಿಬಟ್ಟೆಯನ್ನು ಯಾರೋ ಹೊದಿಸಿದಂತೆ ಭಾಸವಾಯಿತು. ಇದೇಕಿರಬಹುದೆಂದು ಆಲೋಚಿಸಿ ಶ್ರೀಧರರು "ನನಗೆ ಸನ್ಯಾಸಾಶ್ರಮದ ಯೋಗವಿದ್ದರೆ ತಮ್ಮ ಆಜ್ಞೆಯಿಲ್ಲದೇ ಸ್ವೀಕರಿಸಲಾರೆ. ತಮ್ಮನ್ನೇ ಸದ್ಗುರುವೆಂದು ಶರಣಾಗಿದ್ದೇನೆ" ಎಂದು ನುಡಿದರು.

## ಸಜ್ಜನಗಡದಲ್ಲಿ ವಾಸ

ಶ್ರೀಸಮರ್ಥ ರಾಮದಾಸಸ್ವಾಮಿಗಳು ಛತ್ರಪತಿ ಶಿವಾಜಿಯ ಗುರುಗಳು. ಇವರು ಹನುಮಂತನ ಅವತಾರವೆಂದು ಪ್ರಸಿದ್ಧಿ ಇದೆ. ಇವರು ಬಾಲ್ಯದಲ್ಲಿಯೇ ವಿರಕ್ತರಾಗಿ ಪಂಚವಟಿಗೆ ಹೋಗಿ ಹನ್ನೆರಡು ವರ್ಷಗಳ ಕಾಲ ಶ್ರೀರಾಮನಾಮವನ್ನು ಜಪಿಸುತ್ತ ತಪಸ್ಸು ಮಾಡಿದ ಮಹಾನುಭಾವರು. ಆಮೇಲೆ ಹನ್ನೆರಡು ವರ್ಷಗಳವರೆಗೆ ಕಾಲುನಡಿಗೆಯಲ್ಲಿ ತೀರ್ಥಯಾತ್ರೆ ಮಾಡಿ ಶ್ರೀರಾಮನಾಮದ ಮಹಿಮೆಯನ್ನು ಉಪದೇಶಿಸುತ್ತ ಭರತ ಖಂಡದಲ್ಲಿ ಧರ್ಮಜಾಗೃತಿಯನ್ನುಂಟು ಮಾಡಿದರು. ಇವರ ಶಿಷ್ಯ ಪರಂಪರೆ ವಿಸ್ತಾರವಾಗಿದೆ. ಛತ್ರಪತಿ ಶಿವಾಜಿಗೆ ಎಲ್ಲ ನೆರವನ್ನಿತ್ತು, ಸನಾತನ ಧರ್ಮದ ರಕ್ಷಣೆಗಾಗಿ ಸ್ವತಂತ್ರವಾದ ರಾಜ್ಯವನ್ನು ಕಟ್ಟಲು ಪ್ರೋತ್ಸಾಹಿಸಿದರು. ಇವರು ಜನಿಸಿದ್ದು ಶ್ರೀರಾಮನವಮಿಯ ದಿನ (ಚೈತ್ರ ಶುದ್ಧ ನವಮಿ). ತಮ್ಮ ಎಪ್ಪತ್ತು ಮೂರನೆಯ ವರ್ಷದ ವಯಸ್ಸಿನಲ್ಲಿ ಮಾಘ ಬಹುಳ ನವಮಿಯಂದು (ಶಕ 1603; ಕ್ರಿ.ಶ.1700) ದೇಹವನ್ನು ತ್ಯಜಿಸಿದರು. ಅಲ್ಲಿಯೇ ಅವರ ಸಮಾಧಿ ನಿರ್ಮಿತವಾಗಿದೆ. ಆದ್ದರಿಂದ ಶ್ರೀಸಜ್ಜನಗಡವು ಹಿಂದೂಗಳಿಗೆ ಪವಿತ್ರವಾದ ಯಾತ್ರಾಸ್ಥಳವಾಗಿದೆ.

ಶ್ರೀಧರರು ಶ್ರೀಸಮರ್ಥರ ಸೇವೆ ಮಾಡುತ್ತ ಮೂರು ದಿನ ಕಳೆದರು. ಅಲ್ಲಿಯ ಪಾರುಪತ್ಯಗಾರನು ಇವರನ್ನು ಕುರಿತು "ಇಲ್ಲಿ ಯಾತ್ರಿಕರಿಗೆ ಮೂರು ದಿನಗಳವರೆಗೆ ಮಾತ್ರ ಊಟಕ್ಕೆ ಅವಕಾಶವಿದೆ. ಆದ್ದರಿಂದ ಇನ್ನು ನಿಮಗೆ ಭೋಜನ ಸೌಕರ್ಯವಾಗುವುದಿಲ್ಲ" ಎಂದು ಹೇಳಿದನು. ಶ್ರೀಧರರು ಛತ್ರದ ಅನ್ನವನ್ನು ನಂಬಿಕೊಂಡು ಬಂದೇ ಇರಲಿಲ್ಲ. ಅವರಿಗೆ ಪಾರುಪತ್ಯಗಾರರ ಮಾತಿನಿಂದ ಬೇಸರವೇನೂ ಆಗಲಿಲ್ಲ. ಅನಂತರ ಅವರು ಶ್ರೀಸಮರ್ಥರ ಸಮಾಧಿಗೆ ವಂದಿಸಿ ಹೊರಗೆ ಬರುತ್ತಿದ್ದರು. ಪಾರುಪತ್ಯಗಾರನು ಹೊರಗಡೆ ವಿಶ್ರಮಿಸುತ

ಕುಳಿತಿದ್ದನು. ಶ್ರೀಧರರ ಮುಖಚರ್ಯೆಯನ್ನು ಕಂಡು ಆದರದಿಂದ ಬಳಿಗೆ ಕರೆದು "ನೀವು ಯಾರು? ಇಲ್ಲಿಗೆ ಬಂದಿರುವ ಉದ್ದೇಶವೇನು?" ಎಂದು ವಿಚಾರಿಸಿದನು. ಶ್ರೀಧರರು ತಮ್ಮ ವೃತ್ತಾಂತವನ್ನು ಸಂಕ್ಷೇಪವಾಗಿ ತಿಳಿಸಿ, ತಾವು ಸಜ್ಜನಗಡಕ್ಕೆ ಬಂದಿರುವುದು ಶ್ರೀಸಮರ್ಥರಿಗೆ ಸೇವೆಯನ್ನು ಸಲ್ಲಿಸುತ್ತ ಅವರ ಅನುಗ್ರಹವಾಗುವವರೆಗೆ ಅನುಷ್ಠಾನ ಮಾಡುವುದೇ ಆಗಿದೆ ಎಂದರು. ಪಾರುಪತ್ಯಗಾರನು ಹಾಗೆಯೇ ಮಾತನಾಡುತ್ತ ಶ್ರೀಸಮರ್ಥರ "ದಾಸಬೋಧ" ಎಂಬ ಗ್ರಂಥದ ವಿಚಾರವನ್ನೆತ್ತಿದನು. ಶ್ರೀಧರರು ದಾಸಬೋಧವನ್ನು ಚೆನ್ನಾಗಿ ವ್ಯಾಸಂಗ ಮಾಡಿದ್ದರು. ಅಲ್ಲಿರುವ ವಚನಗಳನ್ನು ಉದಾಹರಿಸುತ್ತ ಸೊಗಸಾದ ಒಂದು ಉಪನ್ಯಾಸವನ್ನೇ ಕೊಟ್ಟರು. ಪಾರುಪತ್ಯಗಾರನಿಗೆ ತುಂಬಾ ಸಂತೋಷವಾಯಿತು. ಅವನು ಶ್ರೀಧರರಿಗೆ "ಇಲ್ಲಿ ಕೇವಲ ಯಾತ್ರಾರ್ಥಿಗಳಿಗೆ ಮೂರು ದಿನಗಳ ಮೇಲೆ ಅನ್ನ ಹಾಕುವುದಿಲ್ಲ. ದೇವಾಲಯದ ಕೆಲಸವನ್ನೂ ಮಾಡುತ್ತ ನಿಮ್ಮ ಅನುಷ್ಠಾನವನ್ನೂ ಮಾಡಿಕೊಳ್ಳುವುದಾದರೆ, ನೀವು ಇಲ್ಲಿಯೇ ಇರಬಹುದು" ಎಂದನು. "ನಾನು ಬಂದಿರುವುದು ಶ್ರೀಸಮರ್ಥರ ಸೇವೆಗಾಗಿ. ಅವರು ಆಂಜನೇಯನ ಅವತಾರಮೂರ್ತಿ. ಆಂಜನೇಯನು ಶ್ರೀರಾಮನ ಸೇವೆಯಲ್ಲಿಯೇ ಧನ್ಯನಾದನು. ಹೀಗಿರುವಾಗ ನಾನು ಯಾವ ಲೆಕ್ಕ? ಅವರ ಸೇವೆ ಮಾಡುತ್ತ ನನ್ನ ಅನುಷ್ಠಾನವನ್ನೂ ನಡೆಸಿಕೊಳ್ಳುತ್ತೇನೆ" ಎಂದು ಶ್ರೀಧರರು ಹೇಳಿದರು. ಪಾರುಪತ್ಯಗಾರನು ಒಪ್ಪಿದನು. ಶ್ರೀಧರರು "ಇದೊಂದು ಸದವಕಾಶ ದೊರಕಿತು. ಶ್ರೀಸಮರ್ಥರ ಅನುಗ್ರಹವೇ ಇದು" ಎಂದುಕೊಂಡರು. ಅಂದಿನಿಂದ ಶ್ರೀಧರರು ಮಾಡುವ ಸೇವಾರೂಪವಾದ ತಪಸ್ಸು ಪ್ರಾರಂಭವಾಯಿತು. ಪ್ರಾತಃಕಾಲ ಮೂರು ಘಂಟೆಗೆ ಎದ್ದು ಸ್ವಲ್ಪ ಹೊತ್ತು ಧ್ಯಾನ ಮಾಡಿ ಶ್ರೀರಾಮನಿಗೆ ವಂದಿಸಿ ಗುರುಭಾವನೆಯಿಂದ ಶ್ರೀಸಮರ್ಥರಿಗೆ ನಮಸ್ಕಾರಗಳನ್ನು ಅರ್ಪಿಸಿ ಸಭಾಮಂಟಪ ಮತ್ತು ಎದುರು ಭಾಗವನ್ನು ಗುಡಿಸಿ ಗೋಮಯಜಲದಿಂದ ಸ್ವಚ್ಛ ಮಾಡುತ್ತಿದ್ದರು. ಆಮೇಲೆ

ಕೆರೆಗೆ ಹೋಗಿ ಸ್ನಾನ ಮಾಡಿ ಬಂದು ಎಲ್ಲ ದೇವರಿಗೂ ಕಾಕಡಾರತಿಯನ್ನೆತ್ತುತ್ತಿದ್ದರು. ಆಗ ಬೆಳಿಗ್ಗೆ ಐದು ಗಂಟೆಯಾಗಿರುತ್ತಿತ್ತು. ನೆರೆದ ಭಕ್ತರಿಗೆ ಹಾಲು, ಬೆಣ್ಣೆ, ಕಲ್ಲುಸಕ್ಕರೆ, ಪ್ರಸಾದವನ್ನು ಹಂಚಿ ಮಂದಿರದ ಒಳ ಆವರಣವನ್ನು ಶುದ್ಧಿ ಮಾಡುತ್ತಿದ್ದರು. ಅನಂತರ ಎಲ್ಲ ದೇವರಿಗೂ ಸಂಕ್ಷಿಪ್ತವಾದ ಪೂಜೆಯನ್ನು ಮಾಡಿ ವಿಶೇಷ ಪೂಜೆಗಾಗಿ ಶ್ರೀಗಂಧವನ್ನು ತೇಯುಲು ತೊಡಗುತ್ತಿದ್ದರು. ಸುಮಾರು ಒಂದು ತೆಂಗಿನಕಾಯಿ ಗಾತ್ರದಷ್ಟು ಗಂಧವನ್ನು ಸಿದ್ಧಪಡಿಸಿ, ಕೆರೆಯಿಂದ ಅಭಿಷೇಕಕ್ಕಾಗಿ ನೀರು ತಂದು ತುಂಬುತ್ತಿದ್ದರು. ಆಮೇಲೆ ಸಂಧ್ಯಾವಂದನೆಯನ್ನು ಮಾಡಿ ಪ್ರಾತಃಕಾಲದ ಉಪಾಹಾರವನ್ನು ಸ್ವೀಕರಿಸುತ್ತಿದ್ದರು. ಉಪಾಹಾರವೆಂದರೆ ಹಸಿಯ ನೆಲಗಡಲೆ (ಸೇಂಗಾ) ಆಹಾರ!. ಪಾರುಪತ್ಯಗಾರರು ಇಲ್ಲದ ದಿನ ಅದೂ ಸಿಗುತ್ತಿರಲಿಲ್ಲ. ಸ್ವಲ್ಪ ಅಕ್ಕಿಯನ್ನು ತಿಂದು ತೃಪ್ತರಾಗುತ್ತಿದ್ದರು. ಆಮೇಲೆ ಶ್ರೀಧರರು ದೇವತಾರ್ಚನೆಗೆ ಬೇಕಾದ ಹೂ ತುಳಸಿಗಳನ್ನು ತಂದಿಡುತ್ತಿದ್ದರು. ಶ್ರೀಸಮರ್ಥರಿಗೆ ಕುಡಿಯಲು ಬೇಕಾಗುವುದೆಂಬ ಭಾವನೆಯಿಂದ ತಂಬಿಗೆಯಲ್ಲಿ ನೀರು ತುಂಬಿ ಸಮಾಧಿಯ ಬಳಿಯಲ್ಲಿ ಇಡುತ್ತಿದ್ದರು. ಶ್ರೀಧರರು ಆರಂಭಿಸಿದ ಈ ಪದ್ಧತಿ ಈಗಲೂ ನಡೆದು ಬರುತ್ತಿದೆ. ಮಧ್ಯಾಹ್ನದಲ್ಲಿ ಪ್ರಧಾನ ಅರ್ಚಕರಿಗೆ ಪೂಜೆಯಲ್ಲಿ ಸಹಾಯ ಮಾಡಿ, ಆಮೇಲೆ ಗರ್ಭಗುಡಿಯ ಆವರಣವನ್ನು ಸ್ವಚ್ಛಗೊಳಿಸಿ, ಶ್ರೀಸಮರ್ಥರ ವಸ್ತ್ರಗಳನ್ನು ಒಗೆಯಲು ಕೆರೆಗೆ ಹೋಗುತ್ತಿದ್ದರು. ಅಲ್ಲಿ ಸ್ನಾನ ಮಾಡಿ ಮಾಧ್ಯಾಹ್ನಿಕವನ್ನು ಮುಗಿಸಿ ಬಂದು ಛತ್ರದಲ್ಲಿ ಅತಿಥಿಗಳ ಭೋಜನ ಸಮಯದಲ್ಲಿ ಅವರಿಗೆ ಬಡಿಸುತ್ತಿದ್ದರು. ಅವರ ಭೋಜನವಾದ ಮೇಲೆ ನೆಲವನ್ನು ಸ್ವಚ್ಛಗೊಳಿಸಿ ಪಾಕಶಾಲೆಯಿಂದ ಭಿಕ್ಷಾನ್ನವನ್ನು ತಂದು ಅದನ್ನು ಕೆರೆಯ ನೀರಲ್ಲಿ ಮುಳುಗಿಸಿ ತೆಗೆದು ಮೂರು ಭಾಗಮಾಡಿ ಒಂದನ್ನು ಗೋವಿಗೂ, ಇನ್ನೊಂದನ್ನು ಜಲಚರಗಳಿಗೂ ಅರ್ಪಿಸಿ ಮೂರನೆಯ ಭಾಗವನ್ನು ತಾವು ಭುಜಿಸುತ್ತಿದ್ದರು. ಒಂದೊಂದು ತುತ್ತಿಗೂ ಹದಿಮೂರು

ಸಾರಿ ಶ್ರೀರಾಮನಾಮವನ್ನು ಜಪಿಸುವ ಪದ್ಧತಿಯನ್ನಿಟ್ಟುಕೊಂಡಿದ್ದರು. ಸಂಜೆ ಮತ್ತೆ ಹೂಗಳನ್ನು ಬಿಡಿಸಿ ತಂದು ಪೂಜೆಗಾಗಿ ಮಾಲೆಗಳನ್ನು ಕಟ್ಟುತ್ತಿದ್ದರು. ಆಮೇಲೆ ಸ್ನಾನ ಮಾಡಿ ಸಾಯಂಕಾಲದ ಆಹ್ನಿಕವನ್ನು ಮುಗಿಸಿ ಗರ್ಭಗುಡಿಯನ್ನು ಶುಭ್ರಗೊಳಿಸಿ ದೇವರನ್ನು ಅಲಂಕರಿಸುತ್ತಿದ್ದರು. ರಾತ್ರಿ ಮಂಗಳಾರತಿಯಾದ ಮೇಲೆ ಮಾರುತಿಗೆ ನಮಸ್ಕಾರಗಳನ್ನರ್ಪಿಸಿ, ಮಂದಿರದಲ್ಲಿ ನಡೆಯುತ್ತಿದ್ದ ಸತ್ಸಂಗದ ಶ್ರವಣಕ್ಕೆ ಹೋಗುತ್ತಿದ್ದರು. ಅದಾದ ಮೇಲೆ ದೇವರಿಗೆ ಶಯನದ ಆರತಿಯನ್ನೆತ್ತಿ ಪಾಕಶಾಲೆಗೆ ಅಲ್ಲಿಯ ಕೆಲಸಗಾರರ ನೆರವಿಗೆ ಹೋಗುತ್ತಿದ್ದರು. ಆಮೇಲೆ ನೆಲಗಡಲೆಯ ಉಪಾಹಾರವನ್ನು ತೆಗೆದುಕೊಂಡು ಯಾತ್ರಿಕರ ಯೋಗಕ್ಷೇಮಗಳನ್ನು ವಿಚಾರಿಸುತ್ತಿದ್ದರು. ಯಾತ್ರಿಕರಲ್ಲಿದ್ದ ರೋಗಿಗಳಿಗೆ ಉಪಚಾರ ಮಾಡುವುದು, ಯಾತ್ರಿಕರ ಗಂಟುಮೂಟೆಗಳನ್ನು ಹೊತ್ತಿಡುವುದು ಶ್ರೀಧರರ ನಿತ್ಯದ ಕೆಲಸವಾಗಿತ್ತು. ಎಲ್ಲವೂ ಸದ್ಗುರುವಿನ ಸೇವೆಯೆಂಬ ಭಾವನೆ ದೃಢವಾಗಿ ನಿಂತಿತ್ತು. ಪ್ರತ್ಯೇಕವಾಗಿ ಅನುಷ್ಠಾನ ಮಾಡಲು ಅವಕಾಶ ದೊರೆಯದುದರಿಂದ ಸದಾ ಭಗವಂತನ ನಾಮಜಪ ಬಾಯಲ್ಲಿ ನಡೆಯುತ್ತಲೇ ಇದ್ದಿತು. ಪಾಕಶಾಲೆಯಲ್ಲಿ ಅಡಿಗೆಯುವನಿಲ್ಲದಾಗ ಅಡಿಗೆಯ ಕೆಲಸವನ್ನೂ ಶ್ರೀಧರರೇ ನಿರ್ವಹಿಸುತ್ತಿದ್ದರು.

ಮಂದಿರದ ಮೇಲ್ವಿಚಾರಣೆಯನ್ನು ಶ್ರೀ ನಾರಾಯಣ ಗೋಡ್ಸೆ ಬುವಾ ಎಂಬುವರು ನೋಡಿಕೊಳ್ಳುತ್ತಿದ್ದರು. ಶ್ರೀಧರರು ಅವರನ್ನು ಕಂಡು "ರಾತ್ರಿ ಕಾಲದಲ್ಲಿ ಶ್ರೀಸಮರ್ಥರ ಸಾನ್ನಿಧ್ಯವು ದೊರಕುವಂತೆ ಮಾಡಿಕೊಡೋಣವಾಗಲಿ" ಎಂದು ಬೇಡಿಕೊಂಡರು. ಬುವಾ ಅವರು ಶ್ರೀಧರರ ಯೋಗ್ಯತೆಯೇನೆಂಬುದನ್ನು ಅರಿತಿದ್ದರು. ಶ್ರೀಧರರ ಪ್ರಾರ್ಥನೆಯನ್ನು ಮನ್ನಿಸಿ ಅವರನ್ನು ಮಂದಿರದೊಳಗೆ ಬಿಟ್ಟು ಬೀಗಹಾಕಿ ಬಿಡುತ್ತಿದ್ದರು. ಆ ದಿನಗಳಲ್ಲಿ ರಾತ್ರಿಯೆಲ್ಲ ಶ್ರೀಧರರು ಶ್ರೀಸಮರ್ಥರ ಬಳಿ ಕುಳಿತು ಧ್ಯಾನಾಸಕ್ತರಾಗುತ್ತಿದ್ದರು.

ಒಮ್ಮೆ ಶಂಕರ ಕೃಷ್ಣದೇವ ಎಂಬ ವಕೀಲರು ದಾಸನವಮಿ ಉತ್ಸವಕ್ಕಾಗಿ ಸಜ್ಜನಗಡಕ್ಕೆ ಬಂದರು. ಅವರು ಶ್ರೀಸಮರ್ಥ ಸಂಪ್ರದಾಯದ ಭಕ್ತರಾಗಿದ್ದರು. ಅವರು ಶ್ರೀಧರರ ಸೇವಾತತ್ಪರತೆ, ವೈರಾಗ್ಯ, ಭಕ್ತಿಗಳನ್ನು ಕಂಡು ಪ್ರಸನ್ನರಾದರು. ಶ್ರೀಧರರನ್ನು ಪ್ರೀತಿಯಿಂದ ಬಳಿಗೆ ಕರೆದು "ನೀವು ಶ್ರೀಸಮರ್ಥರ ದಾಸಬೋಧವನ್ನು ಪಾರಾಯಣ ಮಾಡುತ್ತಿದ್ದೀರಾ?" ಎಂದು ಕೇಳಿದರು. ಶ್ರೀಧರರು "ಗುರುಸೇವೆಯಲ್ಲಿ ತೊಡಗಿರುವ ನನಗೆ ಅವಕಾಶವೇ ದೊರೆಯುವುದಿಲ್ಲ. ಸಂಜೆ ಆರತಿಯಾದ ಮೇಲೆ ಸತ್ಸಂಗದಲ್ಲಿ ದಾಸಬೋಧದ ಶ್ರವಣ ನಡೆಯುತ್ತದೆ. ಅದನ್ನು ಆಲಿಸುತ್ತೇನೆ. ಗುರುಸೇವೆಯೇ ನನಗೆ ದಾಸಬೋಧದ ಪಾರಾಯಣವಾಗಿದೆ" ಎಂದರು. "ಸಮಯವೊದಗಿದಾಗ ಹದಿಮೂರು ಸಲ ಅದರ ಪಾರಾಯಣ ಮಾಡಿರಿ" ಎಂದು ವಕೀಲರು ಸಲಹೆ ಮಾಡಿದರು. ಶ್ರೀಧರರು ಅದಕ್ಕೆ ಒಪ್ಪಿ ಸೇವಾಕಾರ್ಯದಲ್ಲಿಯೇ ಸಮಯವನ್ನು ಪಡೆದು ಹದಿಮೂರು ಸಲ ದಾಸಬೋಧದ ಪಾರಾಯಣ ಮಾಡಿ ಮುಗಿಸಿದರು.

ಒಂದು ಸಲ ಐರಣಿ ನಾರಾಯಣ ಮಹಾರಾಜರು ಸಜ್ಜನಗಡಕ್ಕೆ ಬಂದರು. ಅವರು ಗೋಂದಾವಳಿ ಬ್ರಹ್ಮಚೈತನ್ಯರ ಭಕ್ತರು. ಸಮರ್ಥ ಸಂಪ್ರದಾಯದಲ್ಲಿ ಸಿದ್ಧಪುರುಷರೆಂದು ಗಣ್ಯರಾಗಿದ್ದರು. ಅವರ ಶಿಷ್ಯರು ಶ್ರೀಧರರ ಸೇವಾವೃತ್ತಿಯನ್ನು ಕಂಡು ಮುಗ್ಧರಾದರು. ಬರಿಯ ಕೌಪೀನವನ್ನು ಮಾತ್ರ ಧರಿಸಿರುತ್ತಿದ್ದ ಶ್ರೀಧರರಿಗೆ ಕೆಲವು ವಸ್ತ್ರಗಳನ್ನು ಕೊಡಬೇಕೆಂದು ಆ ಶಿಷ್ಯರಿಗೆ ಮನಸ್ಸಾಯಿತು. ಅವರು ಮಹಾರಾಜರಿಗೆ ಈ ವಿಷಯವನ್ನು ಅರಿಕೆ ಮಾಡಿದರು. ಆಗ ನಾರಾಯಣ ಮಹಾರಾಜರು "ಶ್ರೀಧರರು ತುಂಬ ವಿರಕ್ತರು. ನೀವು ಕೊಡುವ ವಸ್ತ್ರಗಳನ್ನು ಸ್ವೀಕರಿಸುವುದಿಲ್ಲ. ಬೆಳ್ಳಿ ಬಂಗಾರದ ರಾಶಿಯನ್ನು ಸುರುವಿದರೂ ತೆಗೆದುಕೊಳ್ಳುವುದಿಲ್ಲ. ಬೇಕಾದರೆ ಪರೀಕ್ಷಿಸಿ ನೋಡಿರಿ" ಎಂದರು.

ಶಿಷ್ಯರು ಕೆಲವು ವಸ್ತ್ರಗಳನ್ನು ತೆಗೆದುಕೊಂಡು ಕೆರೆಯ ಬಳಿಗೆ ಹೋದರು. ಶ್ರೀಧರರು ಸಮರ್ಥರ ವಸ್ತ್ರಗಳನ್ನು ತೊಳೆಯುತ್ತಿದ್ದರು. ಈ ಶಿಷ್ಯರು ಅವರನ್ನು ಕುರಿತು "ನಾರಾಯಣ ಮಹಾರಾಜರು ಈ ವಸ್ತ್ರಗಳನ್ನು ನಿಮಗಾಗಿ ಕಳಿಸಿದ್ದಾರೆ, ತೆಗೆದುಕೊಳ್ಳಬೇಕು" ಎಂದರು. ಶ್ರೀಧರರು ಕಣ್ಣೆತ್ತಿಯೂ ಆ ವಸ್ತ್ರಗಳನ್ನು ನೋಡಲಿಲ್ಲ. ರಾಮನಾಮವನ್ನು ಜಪಿಸುತ್ತ ತಮ್ಮ ಕೆಲಸದಲ್ಲಿ ತೊಡಗಿದ್ದರು. ಶಿಷ್ಯರು ಕಾದು ಕಡೆಗೆ ಆ ವಸ್ತ್ರಗಳನ್ನು ಅಲ್ಲಿಯೇ ಇಟ್ಟು ಬಂದರು. ಶ್ರೀಧರರು ತಮ್ಮ ಕೆಲಸವನ್ನು ಮುಗಿಸಿಕೊಂಡು ದೇವಸ್ಥಾನಕ್ಕೆ ಹೊರಟು ಹೋದರು. ವಸ್ತ್ರಗಳು ಕೆರೆಯ ದಂಡೆಯಲ್ಲೇ ಉಳಿದವು!. ಆ ಶಿಷ್ಯರಿಗೆ ಅವರ ವೈರಾಗ್ಯವನ್ನು ಕಂಡು ಪರಮಾಶ್ಚರ್ಯವಾಯಿತು.

ಶ್ರೀಧರರ ಆಂಜನೇಯ ಭಕ್ತಿಯ ಸೇವೆ ಹೀಗೆಯೇ ಸಾಗುತ್ತಿತ್ತು. ಒಂದು ದಿನ ಶ್ರೀಸಮರ್ಥರ ಧ್ಯಾನದಲ್ಲಿ ಮುಳುಗಿ ಏಕಾಂತದಲ್ಲಿ ಕುಳಿತಿದ್ದರು. ಇದ್ದಕ್ಕಿದ್ದಂತೆ ಒಂದು ಸ್ವಚ್ಛವಾದ ಪ್ರಕಾಶ ಕಾಣಿಸಿತು. ಸ್ವಲ್ಪ ಹೊತ್ತಿನಲ್ಲಿ ಆ ಪ್ರಕಾಶವೇ ಮೂರ್ತಿಗೊಂಡು ಶ್ರೀಸಮರ್ಥ ರಾಮದಾಸ ಸ್ವಾಮಿಗಳ ಮೂರ್ತಿಯನ್ನು ಧರಿಸಿತು. ಎಡಗೈಯಲ್ಲಿ ಯೋಗದಂಡ, ಬಲಗೈಯಲ್ಲಿ ತುಳಸೀಮಣಿಗಳ ಮಾಲೆ, ಬಗಲಲ್ಲಿ ಜೋಳಿಗೆ, ಹರಡಿದ ಜಟೆ, ಕಾಲುಗಳಲ್ಲಿ ಪಾದುಕೆಗಳು, ತುಟಿಗಳಲ್ಲಿ ಶ್ರೀರಾಮನಾಮ, ಶ್ರೀಸಮರ್ಥರು ಮುಂದೆ ಬಂದು ಶ್ರೀಧರರ ಮೈದಡವಿ ಉಪನಿಷತ್ತುಗಳ ಮಹಾವಾಕ್ಯಗಳನ್ನು ಉಪದೇಶಿಸಿ ಅದೃಶ್ಯರಾದರು. ಶ್ರೀಧರರಿಗೆ ಆನಂದದಿಂದ ಕಣ್ಣೀರು ಹರಿಯಿತು. ರೋಮಾಂಚನವಾಯಿತು. ಗುರುಗಳ ಧ್ಯಾನದಲ್ಲಿ ಮೈಮರೆತರು.

ದೇವಾಲಯದ ಸಮೀಪದಲ್ಲಿ ಕಾಬಾಳೆ ಗಿಡಗಳ ದೊಡ್ಡ ಪೊದೆ ಬೆಳೆದಿತ್ತು. ಒಂದು ಸಲ ಹೂ ಬಿಡಿಸಲು ಹೋದ ಶ್ರೀಧರರು ಪೊದೆಗಳ ನಡುವೆ ಕುಳಿತು ಧ್ಯಾನಾಸಕ್ತರಾದರು. ಸಮಾಧಿಯ ಸ್ಥಿತಿಯನ್ನು

ಮುಟ್ಟಿದರು. ಬಾಹ್ಯಪ್ರಜ್ಞೆಯೇ ಇರಲಿಲ್ಲ. ಈ ಸ್ಥಿತಿಯಲ್ಲಿ ಮೂರು ದಿನಗಳವರೆಗೆ ಅಲ್ಲಿಯೇ ಇದ್ದರು. ಶ್ರೀಧರರು ಎಲ್ಲಿ ಹೋದರೆಂದು ದೇವಮಂದಿರದಲ್ಲಿ ಗೊಂದಲ ಹುಟ್ಟಿತು. ಎಲ್ಲರ ಬಾಯಲ್ಲಿಯೂ "ಶ್ರೀಧರರು ಎಲ್ಲಿ?" ಎಂಬ ಒಂದೇ ಪ್ರಶ್ನೆ. ಎಲ್ಲರಿಗೂ ಆಶ್ಚರ್ಯದ ಜೊತೆಗೆ ಭಯ ಹುಟ್ಟಿತು. ದೇವೀ ಪ್ರಸಾದವನ್ನು ಕೇಳಿದರು. ಪ್ರಸಾದವೇನೋ ದೊರಕಿತು. ಆದರೆ ಶ್ರೀಧರರ ಪತ್ತೆ ಇಲ್ಲ. ಮೂರು ದಿನಗಳ ಮೇಲೆ ಶ್ರೀಧರರು ಪ್ರತ್ಯಕ್ಷರಾದರು. "ನೀವು ಎಲ್ಲಿ ಹೋಗಿದ್ದೀರಿ?" ಎಂದು ಎಲ್ಲರೂ ಕೇಳುವವರೇ. "ನನಗೆ ಏನೂ ಗೊತ್ತಿಲ್ಲ. ಹೂ ಬಿಡಿಸಲು ಕಾಬಾಳೆ ಗಿಡಗಳ ಪೊದೆಗೆ ಹೋಗಿದ್ದೆ. ಈಗ ಬರುತ್ತಿದ್ದೇನೆ" ಎಂದರು ಶ್ರೀಧರರು.

ಬರುಬರುತ್ತ ಜನರಿಗೆ ಶ್ರೀಧರರಲ್ಲಿದ್ದ ಪ್ರೀತಿಯು ಗೌರವಕ್ಕೆ ಎಡೆಮಾಡಿಕೊಟ್ಟಿತು. ಅವರ ನಡೆನುಡಿಗಳಿಂದಾಗಿ ಜನರು ಅವರನ್ನು ಆದರದಿಂದ ಕಾಣತೊಡಗಿದರು. ಇದರಿಂದಾಗಿ ಶ್ರೀಧರರಲ್ಲದೆ ಇನ್ನೊಬ್ಬರಾಗಿದ್ದರೆ ತಾನು ಹೆಚ್ಚೆಂಬ ಗರ್ವ ಬರುತ್ತಿತ್ತು. ಶ್ರೀಧರರಲ್ಲಾದರೋ ತಾನು ಅಲ್ಪನೆಂಬ ಬುದ್ಧಿ, ವಿನಯ, ಸೌಮ್ಯತೆಗಳೇ ಹೆಚ್ಚಿದವು. ಆಗ ಸಜ್ಜನಗಡದಲ್ಲಿ ಶ್ರೀಧರರ ಮಹಿಮೆಯನ್ನೂ ತಪಃಶಕ್ತಿಯನ್ನೂ ಪ್ರಕಾಶಕ್ಕೆ ತರುವ ಕೆಲವು ಘಟನೆಗಳು ಜರುಗಿದವು ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಉದಾಹರಿಸಬಹುದು.

1. ಒಬ್ಬ ಹೆಂಗಸಿಗೆ ಭೂತಬಾಧೆ ಒದಗಿತ್ತು. ಯಾವ ಚಿಕಿತ್ಸೆಗೂ ಮಣಿಯದೇ ಅವಳು ಒಂದೇ ಸಮನಾಗಿ ಕೂಗುತ್ತಿದ್ದಳು. ಕೆಲವರು ಅವಳನ್ನು ಸಜ್ಜನಗಿರಿಗೆ ಕರೆತಂದು ಶ್ರೀಧರರರಿಂದ ತೀರ್ಥವನ್ನು ಕೇಳಿದರು. ಶ್ರೀಧರರು "ಜಯ ಜಯ ರಘುವೀರ ಸಮರ್ಥ" ಎಂದು ಹೇಳುತ್ತ ತೀರ್ಥವನ್ನು ಆ ಹೆಂಗಸಿನ

ಮೇಲೆ ಚಿಮುಕಿಸಿದರು. ಒಡನೆಯೆ ಅವಳ ಎಲ್ಲಾ ಬಾಧೆಗಳೂ ನೀಗಿ ಸ್ವಸ್ಥಳಾದಳು.

2. ಒಮ್ಮೆ ಅಂಗಾಯೀದೇವಿಯ ಗುಡಿಯಲ್ಲಿ ಒಂದು ಸರ್ಪವು ಸೇರಿಕೊಂಡಿತು. ಹತ್ತಿರಕ್ಕೆ ಹೋಗದಂತೆ ಅದು ಹೆಡೆಯೆತ್ತಿ ಹೆದರಿಸುತ್ತಿತ್ತು. ಆಗ ಹತ್ತಿರ ಹೋಗಿ ದೇವಿಯ ಪೂಜೆ ಮಾಡಲು ಅರ್ಚಕರು ಹೆದರಿದರು. ಮಂದಿರದ ಪಾರುಪತ್ಯಗಾರರು ಶ್ರೀಧರರಿಗೆ ಈ ವಿಷಯವನ್ನು ತಿಳಿಸಿದರು. ದೇವಿಯ ನಿತ್ಯಪೂಜೆಯನ್ನು ಬಿಡುವುದು ಸರಿಯಲ್ಲವೆಂದೂ ದೇವಿಯ ಪೂಜೆಯನ್ನು ತಾವೇ ಮಾಡುವುದಾಗಿಯೂ ಶ್ರೀಧರರು ಹೇಳಿ ನಿಶ್ಚಿಂತೆಯಿಂದ ದೇವರ ಬಳಿಗೆ ಹೋಗಿ ತಮ್ಮ ಪಾಡಿಗೆ ತಾವು ಪೂಜೆಯನ್ನಾರಂಭಿಸಿದರು. ಸರ್ಪವು ಹೆಡೆಯನ್ನು ತಗ್ಗಿಸಿ ಸುಮ್ಮನೆ ಮಲಗಿಕೊಂಡಿತು. ಮೂರು ದಿನಗಳವರೆಗೆ ಶ್ರೀಧರರಿಂದಲೇ ಪೂಜೆ ನಡೆಯಿತು. ಅನಂತರ ಸರ್ಪವು ಹೊರಟುಹೋಯಿತು.

3. ದತ್ತೋಪಂತ ಎಂಬುವರ ಮಗುವಿಗೆ ತೀವ್ರವಾಗಿ ಜ್ವರ ಬರುತ್ತಿತ್ತು. ವೈದ್ಯರ ಔಷಧದಿಂದ ಗುಣವಾಗಲಿಲ್ಲ. ಮಗು ಬದುಕುವುದಿಲ್ಲವೆಂದು ಎಲ್ಲರಿಗೂ ನಿಶ್ಚಯವಾಯಿತು. ಆಗ ದತ್ತೋಪಂತರ ತಂಗಿ ಕೃಷ್ಣಾಬಾಯಿ ಎಂಬುವರು ಮಗುವನ್ನು ಮಂದಿರಕ್ಕೆ ಎತ್ತಿಕೊಂಡು ಬಂದು ಶ್ರೀಸಮರ್ಥರ ತೀರ್ಥವನ್ನು ಶ್ರೀಧರರು ತಮ್ಮ ಕೈಯಿಂದ ಕೊಡಬೇಕೆಂದೂ ಅದರಿಂದ ಮಗುವಿಗೆ ಗುಣವಾಗುವುದೆಂದೂ ಹಠ ಹಿಡಿದರು. ಶ್ರೀಧರರು "ಅದು ನಿಮ್ಮ ಭಕ್ತಿಯನ್ನವಲಂಬಿಸಿದೆ. ಶ್ರೀಸಮರ್ಥರ ಕಾರುಣ್ಯದಿಂದ ಗುಣವಾಗಬಹುದು" ಎಂದು ಹೇಳಿ ತೀರ್ಥವನ್ನು ಕೊಟ್ಟರು. ಆಮೇಲೆ ಯಾವ ಚಿಕಿತ್ಸೆಯನ್ನೂ

ಮಾಡಲಿಲ್ಲ. ಮಗುವಿಗೆ ಗುಣವಾಗಿ ಬದುಕಿಕೊಂಡಿತು.

4. ಒಂದು ದಿನ ಆಶ್ರಮದಲ್ಲಿ ಕೆಲಸ ಮಾಡುತ್ತಿದ್ದ ಒಬ್ಬ ಹುಡುಗಿ ಸಂಪಿಗೆ ಹೂಗಳನ್ನು ಕಿತ್ತುಕೊಡುವಂತೆ ಶ್ರೀಧರರನ್ನು ಕೇಳಿಕೊಂಡಳು. ಅವರು ಮರವನ್ನು ಹತ್ತಿ ಹೂಗಳನ್ನು ಕಿತ್ತು ಕೆಳಗಿಳಿದರು. ಅಷ್ಟರಲ್ಲಿ ಒಂದು ದೊಡ್ಡ ಸರ್ಪ ಹೆಡೆಯೆತ್ತಿ ಬುಸುಗುಟ್ಟುತ್ತ ಬಂದಿತು. ಹುಡುಗಿ ಹೆದರಿಕೆಯಿಂದ ಚೀರುತ್ತಾ ಓಡಿದಳು. ಶ್ರೀಧರರು ಅಲ್ಲಾಡದೆ ನಿಂತಿದ್ದರು. ಸರ್ಪವು ಇವರ ಹತ್ತಿರ ಬಂದು ಕಾಲುಗಳ ಮೇಲೆ ಹರಿದು ತನ್ನ ಪಾಡಿಗೆ ತಾನು ಹೊರಟು ಹೋಯಿತು.

ಪಾಕಶಾಲೆಯ ಒಬ್ಬ ಅಡಿಗೆಯುವನಿಗೆ ಮಂತ್ರ ತಂತ್ರಗಳ ಪರಿಚಯವಿತ್ತು. ಅವನು ಶ್ರೀಧರರಿಗೆ "ನಾನು ಭೂತಗಳನ್ನು ವಶಪಡಿಸಿಕೊಳ್ಳುವ ಮಂತ್ರಗಳನ್ನು ನಿಮಗೆ ಉಪದೇಶಿಸುತ್ತೇನೆ. ಉಪದೇಶ ತೆಗೆದುಕೊಳ್ಳಿರಿ" ಎಂದು ಹೇಳಿದನು. ಶ್ರೀಧರರು "ನನಗೆ ಭೂತವಶೀಕರಣದಿಂದ ಆಗಬೇಕಾದ್ದೇನು? ಶ್ರೀರಾಮತಾರಕ ಮಂತ್ರ ಎಲ್ಲ ಮಂತ್ರಗಳಿಗೂ ರಾಜ. ಅದೊಂದು ನನ್ನ ನಾಲಿಗೆಯಲ್ಲಿ ಸದಾ ಇದ್ದರೆ ಸಾಕು" ಎಂದು ಹೇಳಿಬಿಟ್ಟರು. ಸಜ್ಜನಗಡಕ್ಕೆ ಬಂದ ಒಬ್ಬ ಹಠಯೋಗಿಗಳು "ನಿಮಗೆ ಸಮಾಧಿಯಾಗುವ ಕ್ರಮವನ್ನು ಹೇಳಿಕೊಡುತ್ತೇನೆ" ಎಂದರು. ಶ್ರೀಧರರು "ಸಮಾಧಿ ಎನ್ನುವುದು ಬಹಳ ದೊಡ್ಡ ವಿಷಯ. ನಮ್ಮ ಸಾಧನೆಯಿಂದ ಕ್ರಮವಾಗಿ ಆ ಸ್ಥಿತಿಗೆ ಏರಬೇಕು. ಕಾಯಿಯನ್ನು ಗುದ್ದಿ ಹಣ್ಣು ಮಾಡಿದರೆ ಹಣ್ಣಿನ ಸವಿ ಬರುತ್ತದೆಯೇ? ಸಾಧನ ಮಾರ್ಗದಲ್ಲಿ ನಾನು ಬಹಳ ಹಿಂದೆ ಇದ್ದೇನೆ. ನಾನು ಇನ್ನೂ ಎಳೆಯ ಕಾಯಿ" ಎಂದು ತಿಳಿಸಿದರು. ಇವೆಲ್ಲವೂ ಶ್ರೀಧರರ ನಮ್ರತೆಯನ್ನು ತಿಳಿಸುವುದಲ್ಲದೆ ಬೇರೆಯಲ್ಲ. ಅವರು ಸಾಧನ ಮಾರ್ಗದಲ್ಲಿ ಬಹಳ ಮುಂದುವರಿದಿದ್ದರು. ಸಮಾಧಿಯ ಅನುಭಾವವೂ

ಅವರಿಗೆ ಆಗಿತ್ತು.

ಸಜ್ಜನಗಡಕ್ಕೆ ಗೋಕರ್ಣದಿಂದ ಒಬ್ಬರು ಬಂದರು. ಅವರಿಗೆ ಮದುವೆಯಾಗಿತ್ತು. ಯಾವುದೋ ಗೃಹಕೃತ್ಯದ ವಿಷಯದಲ್ಲಿ ಬೇಸರಗೊಂಡು ಬಂದಿದ್ದರು. ತಪಸ್ಸು ಮಾಡುವುದಕ್ಕಾಗಿ ಬಂದಿದ್ದೇನೆಂದು ತಿಳಿಸಿದರು. ಶ್ರೀಧರರು "ಸ್ವಾಮಿ, ನೀವು ಗೃಹಸ್ಥರಾಗಿ ಹೆಂಡತಿಯನ್ನು ತೊರೆದು ಬಂದಿರುವುದು ಸರಿಯಲ್ಲ. ಹೆಂಡತಿ ಕಣ್ಣೀರು ಸುರಿಸುವಂತೆ ಮಾಡಿ ನೀವು ತಪಸ್ಸು ಮಾಡುವುದೆಂದರೇನು? ಸಂಸಾರದಲ್ಲಿದ್ದೇ ನೀವು ಸಾಧನಮಾರ್ಗವನ್ನು ಅವಲಂಬಿಸಬಹುದು. ಮನೆಯಲ್ಲಿಯೇ ನೀವು ದೈವಭಕ್ತಿಯುಳ್ಳವರಾಗಿ ಉತ್ತಮ ಜೀವನವನ್ನು ನಡೆಸಿರಿ. ಕಾಲಕ್ರಮದಲ್ಲಿ ಭಗವಂತನೇ ಮುಂದಿನ ದಾರಿಯನ್ನು ತೋರಿಸುತ್ತಾನೆ. ನಿಮ್ಮ ಈ ಕ್ರಮ ಸರಿಯಲ್ಲ " ಎಂದು ಬುದ್ಧಿವಾದ ಹೇಳಿ ಅವರನ್ನು ಕಳಿಸಿಕೊಟ್ಟರು.

ಸಮರ್ಥ ಮಂದಿರದ ಆಡಳಿತದಲ್ಲಿ ಬದಲಾವಣೆಯಾಯಿತು. ಹಿಂದಿನ ಪಾರುಪತ್ಯಗಾರರು ಹೋಗಿ ಹೊಸಬರು ಬಂದರು. ಇತರ ಕೆಲಸಗಾರರೂ ಬದಲಾದರು. ಅವರಿಗೆ ಶ್ರೀಧರರ ಯೋಗ್ಯತೆಯ ಅರಿವಿರಲಿಲ್ಲ. "ಬರಿಯ ಲಂಗೋಟಿಯುಟ್ಟು ಹಗಲಿರುಳು ಸಂಬಳವಿಲ್ಲದೆ ದುಡಿಯುವ ಈತನು ಹೊಟ್ಟೆಪಾಡಿಗೆ ಸೇರಿಕೊಂಡ ಭಿಕಾರಿ" ಎಂದು ಅವಾಚ್ಯ ಮಾತುಗಳನ್ನು ಆಡಿ ಕಿರುಕುಳ ಕೊಡತೊಡಗಿದರು. ಶ್ರೀಧರರು ತುಟಿಪಿಟಕ್ಕೆನ್ನದೆ ತಾಳ್ಮೆಯ ಮೂರ್ತಿಯಾಗಿಯೇ ತಮ್ಮ ಸೇವೆಯಲ್ಲಿ ತೊಡಗಿರುತ್ತಿದ್ದರು. ಅಲ್ಲಿಯ ಗದ್ದುಗೆಯ ಪೀಠಸ್ಥರು ಬಾಪು ಮಹಾರಾಜರು. ಕೆಲವರು ಅವರ ಬಳಿಗೆ ಹೋಗಿ "ಈತನು ಕೌಪೀನಧಾರಿಯಾಗಿ ಎಲ್ಲೆಡೆಯೂ ತಿರುಗುತ್ತಾನೆ. ಸ್ತ್ರೀಯರಿದ್ದಲ್ಲಿ ಹೀಗೆ ಸಂಚರಿಸುವುದು ಅಶ್ಲೀಲ. ಇವನಿಗೆ ಬುದ್ಧಿ ಹೇಳಿರಿ" ಎಂದು ದೂರಿದರು. ಬಾಪುಮಹಾರಾಜರು ಶ್ರೀಧರರನ್ನು ಚೆನ್ನಾಗಿ ಬಲ್ಲರು. ಅವರು "ಇದು

ಕೌಪೀನಧಾರಿಗಳ ಮಠ. ನಮ್ಮ ಗುರುಗಳಾದ ಶ್ರೀ ಸಮರ್ಥರೇ ಕೌಪೀನಧಾರಿಗಳು. ಇಂತಹ ಸಾಧಕರಾದ ಭಕ್ತರನ್ನು ದೂರುವುದು ತರವಲ್ಲ" ಎಂದು ಹೇಳಿಬಿಟ್ಟರು. ಶ್ರೀಧರರಿಗಾಗುತ್ತಿದ್ದ ತೊಂದರೆಗಳನ್ನು ಗಮನಿಸಿ ಅವರು ಹೊಸ ಪಾರುಪತ್ಯಗಾರನನ್ನೂ ಇನ್ನೊಬ್ಬ ಕೆಲಸಗಾರನನ್ನೂ ಕೆಲಸದಿಂದ ವಜಾ ಮಾಡಿದರು.

ದಾಸನವಮಿಯ ರಾತ್ರಿ ಶ್ರೀಧರರು ಶ್ರೀಸಮರ್ಥರ ಸಮಾಧಿಯ ಬಳಿ ಕುಳಿತು ಧ್ಯಾನಾಸಕ್ತರಾಗಿದ್ದರು. ಒಮ್ಮೆಯೇ ಶ್ರೀಸಮರ್ಥರು ಪ್ರತ್ಯಕ್ಷರಾಗಿ "ಇಲ್ಲಿ ನಿನ್ನ ಸಾಧನೆಯ ಕಾರ್ಯ ಮುಗಿಯಿತು. ದಕ್ಷಿಣ ದೇಶದ ಕಡೆಗೆ ಹೋಗಿ ಧರ್ಮಪ್ರಚಾರದ ಕಾರ್ಯವನ್ನು ನಡೆಸು" ಎಂದರು. ಶ್ರೀ ಗುರುಗಳ ಅನುಗ್ರಹವಾಯಿತೆಂದು ಶ್ರೀಧರರಿಗೆ ಆನಂದಬಾಷ್ಪಹರಿಯಿತು. ಒಡನೆಯೇ ಅಲ್ಲಿಂದ ಹೊರಟು ಶ್ರೀಕೃಷ್ಣಬುವಾ ಎಂಬ ಶ್ರೀ ಸಮರ್ಥ ಭಕ್ತರಿಗೆ ಈ ವಿಷಯವನ್ನು ತಿಳಿಸಿ ಶ್ರೀದಾಸಬೋಧ, ಶ್ರೀ ಶಂಕರಚಾರ್ಯರ ಗೀತಾಭಾಷ್ಯ ಈ ಎರಡು ಗ್ರಂಥಗಳನ್ನು ತೆಗೆದುಕೊಂಡು ಸಜ್ಜನಗಡದ ಮಹಾದ್ವಾರದಿಂದ ಹೊರಬಂದು ದಕ್ಷಿಣಕ್ಕೆ ಪ್ರಯಾಣ ಮಾಡಿದರು.

## ಕರ್ನಾಟಕದಲ್ಲಿ

ಶ್ರೀಧರರು ಪೇರಗಾಂವ, ಕೊಲ್ಲಾಪುರ ಮಾರ್ಗವಾಗಿ ಪ್ರಯಾಣ ಮಾಡಿದರು. ಎಲ್ಲೆಡೆಯೂ ಭಿಕ್ಷಾನ್ನದ ಊಟ, ಯಾವುದಾದರೂ ದೇವಸ್ಥಾನದಲ್ಲಿ ರಾತ್ರಿ ವಿಶ್ರಾಂತಿ.

ಆ ಪ್ರಾಂತದ ಭಕ್ತಜನರು ಸಜ್ಜನಗಡದಲ್ಲಿ ಇವರನ್ನು ಕಂಡಿದ್ದರು. ಅಲ್ಲಲ್ಲಿ ಧಾರ್ಮಿಕ ಉಪನ್ಯಾಸಗಳನ್ನು ಇವರಿಂದ ಏರ್ಪಡಿಸುತ್ತಿದ್ದರು. ದಾಸಬೋಧ ಮತ್ತು ಭಗವದ್ಗೀತೆಗಳ ವಿಷಯದಲ್ಲಿ ಶ್ರೀಧರರು ಸೊಗಸಾದ ಉಪನ್ಯಾಸಗಳನ್ನು ನೀಡುತ್ತಿದ್ದರು. ಯಾರ ಮನೆಗೂ ಭೋಜನಕ್ಕೆ

ಹೋಗುತ್ತಿರಲಿಲ್ಲ. ತ್ರಿಕಾಲ ಸ್ನಾನವನ್ನೂ, ಅನುಷ್ಠಾನವನ್ನೂ ನಡೆಸುತ್ತಲೇ ಇದ್ದರು. ಪ್ರಾತಃಕಾಲದ ಸ್ನಾನಕ್ಕೆ ನೀರು ದೊರೆಯದ ಸ್ಥಳದಲ್ಲಿ ಮಾನಸಿಕವಾಗಿ ಅನುಷ್ಠಾನವನ್ನು ಮಾಡಿ ಮುಂದೆ ಸಾಗುತ್ತಿದ್ದರು. ಆ ದಿನ ಭಿಕ್ಷಾನ್ನಕ್ಕೆ ಹೋಗದೇ ಉಪವಾಸವಿರುತ್ತಿದ್ದರು. ಧರ್ಮದ ವಿಷಯವಾಗಿ ಜನರಿಗೆ ಬೋಧೆಯನ್ನು ಮಾಡುತ್ತ ಗೋಕರ್ಣವನ್ನು ಸೇರಿದರು.

ಗೋಕರ್ಣ ಕನ್ನಡನಾಡಿಗೆ ಸೇರಿದೆ. ಹಿಂದೆ ಗುಲ್ಬರ್ಗದಲ್ಲಿದ್ದುದರಿಂದ ಶ್ರೀಧರರಿಗೆ ಕನ್ನಡ ಬರುತ್ತಿತ್ತು. ಸಜ್ಜನಗಡಕ್ಕೆ ಬಂದ ಕನ್ನಡ ದೇಶದ ಯಾತ್ರಿಕರೊಡನೆ ಕನ್ನಡದಲ್ಲಿ ಮಾತಾಡುತ್ತಿದ್ದರು. ಇದರಿಂದ ಭಾಷೆಯ ತೊಂದರೆ ಅವರಿಗಾಗಲಿಲ್ಲ. ಮುಂದೆ ಅವರ ಕಾರ್ಯಕ್ಷೇತ್ರ ಕನ್ನಡನಾಡೇ ಆಯಿತು. ಅವರಿಗೆ ಕನ್ನಡ, ಮರಾಠಿ, ಉರ್ದು, ಹಿಂದಿ ಮತ್ತು ಇಂಗ್ಲೀಷ್ ಭಾಷೆಗಳ ಪರಿಚಯ ಚೆನ್ನಾಗಿತ್ತು. ಗೋಕರ್ಣದ ಮಹಾಬಲೇಶ್ವರ ಸನ್ನಿಧಾನದಲ್ಲಿ ಹಲವು ದಿನಗಳವರೆಗೆ ಇದ್ದು ನಿತ್ಯ ಜಪದಲ್ಲಿ ತೊಡಗಿದ್ದರು. ಕೆಲವು ಉಪನ್ಯಾಸಗಳೂ ನಡೆದವು. ಸುತ್ತಮುತ್ತಲಿನ ಜನರಿಗೆ ಇವರಲ್ಲಿ ಪ್ರೀತಿ ಗೌರವಗಳು ಹೆಚ್ಚಿದವು. ಎಲ್ಲರೂ ಶ್ರೀಧರ ಸಾಧುಗಳೆಂದು ಇವರನ್ನು ಕರೆಯಲಾರಂಭಿಸಿದರು. ಅನಂತರ ಸಿರಸಿ ತಾಲ್ಲೂಕಿನಲ್ಲಿರುವ ಶೀಗೇಹಳ್ಳಿಗೆ ಹೋದರು.

ಶೀಗೇಹಳ್ಳಿಯ ಪರಮಾನಂದ ಮಠದಲ್ಲಿ ಶ್ರೀ ಶಿವಾನಂದ ಸ್ವಾಮಿಗಳಿದ್ದರು. ಜನರಿಗೆ ಅವರಬಗ್ಗೆ ವಿಶೇಷವಾದ ಮನ್ನಣೆ ಇತ್ತು. ಶ್ರೀಧರ ಸಾಧುಗಳಿಗೂ ಶ್ರೀ ಶಿವಾನಂದ ಸ್ವಾಮಿಗಳಿಗೂ ಪರಿಚಯವಾಯಿತು. ಶ್ರೀಧರರು ಮೇಲ್ಮಟ್ಟದ ಸಾಧನೆಯನ್ನು ಮಾಡಿದ ಮಹಾ ವಿರಕ್ತರೆಂಬುದು ಶಿವಾನಂದ ಸ್ವಾಮಿಗಳಿಗೆ ಬೇಗನೇ ಗೊತ್ತಾಯಿತು. ಅವರ ವಿಷಯದಲ್ಲಿ ಹೆಚ್ಚಿನ ವಾತ್ಸಲ್ಯ ಮೂಡಿತು. ಹಠಯೋಗದಲ್ಲಿ ಆಸಕ್ತಿಯಿಲ್ಲ ಎಂದು ಶ್ರೀಧರರು ತಿಳಿಸಿದರು. ಅಲ್ಲಿಂದ

ಹೊರಟು ಮಂಜುಗುಣಿ, ಸಿರಸಿ, ಸೊರಬ, ಸಾಗರಗಳ ಮೂಲಕ ಪಾದಯಾತ್ರೆ ಮಾಡುತ್ತ ಸಂಪೆಕಟ್ಟೆ ಮಠಕ್ಕೆ ಹೋದರು. ಅವರ ಧಾರ್ಮಿಕ ಪ್ರವಚನಗಳು ಊರು ಊರುಗಳಲ್ಲಿಯೂ ನಡೆದವು. ಗುಂಪುಗುಂಪಾಗಿ ಆಸ್ತಿಕ ಜನರು ಸಭೆಗೆ ಬರುತ್ತಿದ್ದರು. ಶ್ರೀಧರರ ದಿವ್ಯವಾಣಿಯಿಂದ ಸಕಲರೂ ಪ್ರಭಾವಿತರಾಗಿದ್ದರು. ಸಂಪೆಕಟ್ಟೆ ಮಠದಲ್ಲಿ ಎರಡು ತಿಂಗಳವರೆಗೆ ಇದ್ದು ಸಜ್ಜನಗಡದಲ್ಲಿ ನಡೆಸಿದಂತೆ, ಅಲ್ಲಿಯು ನರಸಿಂಹಸ್ವಾಮಿಯ ಸೇವೆಯನ್ನು ಭಕ್ತಿಯಿಂದ ನಡೆಸಿ ಕೊಡಚಾದ್ರಿಗೆ ಹೋದರು. ಕೊಡಚಾದ್ರಿಯಲ್ಲಿ ಏಕಾಂತಸ್ಥಳ ದೊರಕಿದ್ದರಿಂದ ಅವರ ತಪಸ್ಸು ನಿರ್ವಿಘ್ನವಾಗಿ ಬಹುಕಾಲ ಸಾಗಿತು. ಅನಂತರ ಶ್ರೀಧರ ಸಾಧುಗಳು ಕೊಡಚಾದ್ರಿ ಬೆಟ್ಟದಿಂದ ಇಳಿದು ಧರ್ಮಪ್ರವಚನಗಳನ್ನು ಮಾಡುತ್ತ ಬನವಾಸಿಗೆ ಬಂದರು. ಬನವಾಸಿಯಲ್ಲಿ ಶ್ರೀ ಶಂಕರಾನಂದರೆಂಬ ಯತಿಗಳ ಪರಿಚಯವಾಯಿತು. ಅವರು ಶೀಗೇಹಳ್ಳಿ ಶಿವಾನಂದಸ್ವಾಮಿಗಳ ಶಿಷ್ಯರು. ಬನವಾಸಿಯಲ್ಲಿದ್ದ ಕೆಲವು ಸಜ್ಜನರ ಕೋರಿಕೆಯಂತೆ ಅಲ್ಲಿಯೇ ಭಿಕ್ಷಾನ್ನ ಮಾಡುತ್ತ ನೆಲೆಸಿದ್ದು ಪುರಾಣ ಪ್ರವಚನ ಮಾಡಿದರು. ಆಮೇಲೆ ಮತ್ತೆ ಶೀಗೇಹಳ್ಳಿಗೆ ಬಂದರು.

ಶ್ರೀ ಶಿವಾನಂದರಿಗೆ ಶ್ರೀಧರರ ಆಗಮನದಿಂದ ತುಂಬ ಸಂತೋಷವಾಯಿತು. ಮಠದಲ್ಲಿಯೇ ಇರಬೇಕೆಂದು ಹೇಳಿದರು. ಶ್ರೀಧರರು ಗುರುಬುದ್ಧಿಯಿಂದ ಶಿವಾನಂದಸ್ವಾಮಿಗಳ ಸೇವೆ ಮಾಡುತ್ತ ತಮ್ಮ ತಪಸ್ಸನ್ನು ತೀವ್ರಗೊಳಿಸುತ್ತ ಅಲ್ಲಿ ಉಳಿದರು.

ಶೀಗೇಹಳ್ಳಿಗೆ ಬಂದ ಯಾತ್ರಾರ್ಥಿಗಳು ಹೆಚ್ಚಾಗಿ ಶ್ರೀಧರರ ಬಳಿ ಸೇರಿ ಪರಮಾರ್ಥದ ವಿಷಯವಾಗಿ ಮಾತಾಡಿ ತಮ್ಮ ಸಂದೇಹಗಳನ್ನು ಬಗೆಹರಿಸಿ ಕೊಳ್ಳುತ್ತಿದ್ದರು. ಒಂದು ದಿನ ಶ್ರೀ ಶಿವಾನಂದರು ವಿನೋದವಾಗಿ "ಏನು ಶ್ರೀಧರ ಸಾಧುಗಳೇ, ಇಲ್ಲಿಗೆ ಬರುವವರೆಲ್ಲ ನಿಮ್ಮ ಹತ್ತಿರವೇ ಬರುತ್ತಾರಲ್ಲ! ನನಗಿಂತ ನಿಮ್ಮಲ್ಲಿಯೇ ಅವರಿಗೆ ಹೆಚ್ಚು

ಭಕ್ತಿ ಇದೆಯಲ್ಲ!" ಎಂದರು. ಅದಕ್ಕೆ ಉತ್ತರವಾಗಿ ಶ್ರೀಧರರು "ನನ್ನನ್ನು ನೀವು ತುಂಬ ಹೊಗಳುತ್ತೀರಿ. ಆದ್ದರಿಂದ ಹಾಗೆ ಬರುತ್ತಾರೆ. ಈ ಹೊಗಳಿಕೆಯನ್ನು ನಿಲ್ಲಿಸಿದರೆ ಯಾರೂ ಬರುವುದಿಲ್ಲ !. 'ಸಾಧುಗಳೆ' ಎಂದು ಬಹುವಚನದಿಂದ ನನ್ನನ್ನು ಕರೆಯಬೇಡಿ 'ದಾಸ' ಎಂದು ಏಕವಚನದಲ್ಲಿ ಮಾತಾಡಿಸಿರಿ. ನಿಮ್ಮಂತಹ ಮಹಾತ್ಮರು ಬಹುವಚನದಿಂದ ನನ್ನನ್ನು ಗೌರವಿಸುವುದು ನನ್ನ ಶ್ರೇಯಸ್ಸಿಗೆ ಒಳ್ಳೆಯದಲ್ಲ" ಎಂದು ನುಡಿದರು. ಅಂದಿನಿಂದ ಶ್ರೀ ಶಿವಾನಂದರು 'ದಾಸ' ಎಂದೇ ಸಂಬೋಧಿಸಲು ಪ್ರಾರಂಭಿಸಿದರು.

ಶೀಗೇಹಳ್ಳಿಯಲ್ಲಿ ಶ್ರೀಧರರಿಗೆ ತಪಸ್ಸು ಮಾಡಲು ವಿಶೇಷವಾದ ಅವಕಾಶ ಸಿಕ್ಕಿತು. ಇದರೊಡನೆ ಪುರಾಣ ಪ್ರವಚನಗಳನ್ನೂ ನಡೆಸುತ್ತಿದ್ದರಲ್ಲದೆ ಹರಿಕೀರ್ತನೆಯನ್ನೂ ಮಾಡುತ್ತಿದ್ದರು. ಸುಶ್ರಾವ್ಯವಾಗಿ ಪದಗಳನ್ನು ಹಾಡುತ್ತ ಭಕ್ತಿಯ ಆವೇಶ ಬಂದು ನೃತ್ಯವನ್ನೂ ಮಾಡುತ್ತಿದ್ದರು. ಒಂದು ದಿನ ಶ್ರೀ ಶಿವಾನಂದರು ಇದ್ದಕ್ಕಿದ್ದಂತೆ ಶ್ರೀಧರರಿಗೆ ಕಮಂಡಲುವನ್ನೂ, ಕಾವೀಶಾಠಿಯನ್ನೂ ಕೊಟ್ಟು "ದಾಸ, ನಿನಗೆ ಈಗಲೇ ಸಂನ್ಯಾಸ ದೀಕ್ಷೆಯನ್ನು ಕೊಡುತ್ತಿದ್ದೇನೆ. ಇದು ಅರ್ಧ ಸಂನ್ಯಾಸ, ಮುಂದೆ ಶ್ರೀ ಸಮರ್ಥರ ಆದೇಶದಂತೆ ಈ ಸ್ಥಳದಲ್ಲಿಯೇ ಪೂರ್ಣ ಸಂನ್ಯಾಸಯೋಗ ಉಂಟು. ನನ್ನ ದೇಹ ಆಗ ಇರಲಾರದು. ಆದ್ದರಿಂದ ಈ ಕಾರ್ಯವನ್ನು ಮೊದಲೇ ಮಾಡಿದ್ದೇನೆ" ಎಂದು ಹೇಳಿದರು ಇನ್ನೊಂದು ದಿನ "ದಾಸ, ನಿನ್ನಿಂದ ಮುಂದೆ ಧರ್ಮಧ್ವಜದ ಸ್ಥಾಪನೆಯಾಗುವುದು" ಎಂದು ಥಟ್ಟನೆ ನುಡಿದರು.

ಶ್ರೀಧರರು ಹಲವಾರು ನಿಯಮಗಳನ್ನು ತಾವೇ ವಿಧಿಸಿಕೊಂಡರು. ದನಕರುಗಳಂತೆ ಬಾಯಿಂದಲೇ ಗಿಡಗಳ ಸೊಪ್ಪನ್ನು ಹರಿದು ತಿನ್ನುತ್ತ ತಪಸ್ಸು ಮಾಡಿದರು. ಗೋಮೂತ್ರದಲ್ಲಿ ಕಲಸಿ ಮಾಡಿದ ಜೋಳದ ರೊಟ್ಟಿಯನ್ನು ಕೆಲವು ದಿವಸ ತಿನ್ನುತ್ತಿದ್ದರು. ಕೆಲವು ದಿನ ಅಡವಿಯಲ್ಲಿ

ಸಿಗುವ ಆಲದಹಣ್ಣು – ಮೊದಲಾದ್ದನ್ನೇ ತಿನ್ನುವ ಅಭ್ಯಾಸ ಮಾಡಿದರು. ಈ ಕಾರಣಗಳಿಂದ ಅವರ ದೇಹ ತುಂಬಾ ಕ್ಷೀಣಿಸಿತು. ಇದೇ ಸಮಯದಲ್ಲಿ ಸಜ್ಜನಗಡಕ್ಕೆ ಹೋಗಬೇಕೆಂಬ ತೀವ್ರವಾದ ಅಭಿಲಾಷೆ ಹುಟ್ಟಿತು. ಅವರ ದೇಹಸ್ಥಿತಿಯನ್ನು ನೋಡಿ ಶ್ರೀ ಶಿವಾನಂದರು "ದಾಸ, ನಿನ್ನ ಸಹಾಯಕ್ಕೆ ಒಬ್ಬ ಶಿಷ್ಯನನ್ನು ಕಳಿಸಿಕೊಡುತ್ತೇನೆ" ಎಂದರು. ಶ್ರೀಧರರು ಏನೂ ಹೇಳಲಿಲ್ಲ. ಶ್ರೀ ಶಿವಾನಂದರು ಧ್ಯಾನಕ್ಕಾಗಿ ಗುಹೆಯನ್ನು ಪ್ರವೇಶಿಸಿದಾಗ, ಶ್ರೀಧರರು ತಮ್ಮ ಕಮಂಡಲವನ್ನು ಹಿಡಿದು ಒಂಟಿಯಾಗಿ ಸಜ್ಜನಗಡಕ್ಕೆ ಹೊರಟೇಬಿಟ್ಟರು.

## ಮರಳಿ ಸಜ್ಜನಗಡಕ್ಕೆ

ದೇಹದಲ್ಲಿ ಅಶಕ್ತತೆ ಬಹಳ ಇದ್ದುದರಿಂದ ಸಜ್ಜನಗಡದ ಯಾತ್ರೆ ಶ್ರಮದಾಯಕವಾಯಿತು. ಆದರೆ ಶ್ರೀಧರ ಸಾಧುಗಳ ಉತ್ಸಾಹ ಶಕ್ತಿಯ ಎದುರಿಗೆ ಯಾವುದೂ ಅಡ್ಡಿಯಲ್ಲ. ದಾಸನವಮಿಯ ರಾತ್ರಿ ಸಜ್ಜನಗಡವನ್ನು ಸೇರಿಯೇಬಿಟ್ಟರು. ಶ್ರೀಧರರು ಬಂದ ಸುದ್ದಿಯನ್ನು ಕೇಳಿ ಊರಿಗೆ ಊರೇ ಆನಂದ ಸಂಭ್ರಮಗಳಿಂದ ನಲಿಯಿತು. ಈಗ ಪರಿಸ್ಥಿತಿ ಬದಲಾಗಿತ್ತು. ಭಿಕ್ಷಾನ್ನದ ಆ ಹುಡುಗನನ್ನು ಈಗ ಜನರು ಭಕ್ತಿ ಗೌರವಗಳಿಂದ ಕಂಡರು. ಶ್ರೀಧರರ ಅನಾರೋಗ್ಯವನ್ನು ಗಮನಿಸಿ ಯಥಾಶಕ್ತಿಯಾಗಿ ಉಪಚರಿಸಿದರು. ಪ್ರತಿದಿನ ಶ್ರೀಸಮರ್ಥರ ಮಂದಿರಕ್ಕೆ ಹೋಗಿ ವಂದನೆಗಳನ್ನು ಅರ್ಪಿಸಿ, ಶ್ರೀಧರರು ತಮ್ಮ ಪ್ರವಚನಗಳನ್ನು ನಡೆಸಿದರು. ಕೆಲವು ದಿನಗಳ ಮೇಲೆ ಗ್ರಂಥ ರಚನೆ ಮಾಡಬೇಕೆಂಬ ಸ್ಫೂರ್ತಿ ಹುಟ್ಟಿತು. ಶ್ರೀ ಸಮರ್ಥಾವತಾರ ಸ್ತೋತ್ರ, ಶ್ರೀರಾಮ ಗೌರವ, ಶ್ರೀರಾಮ ಭಕ್ತಿಸಾರ, ಪ್ರಾತಃಸ್ಮರಣೆ, ನಿತ್ಯಪಾಠ ರಾಮಾಯಣ, ಶ್ರೀರಾಮಪಾಠ, ಶ್ರೀ ಸಮರ್ಥಪಾಠ, ಪಂಚೀಕರಣ, ಸ್ವಾತ್ಮನಿರೂಪಣ – ಎಂಬ ಗ್ರಂಥಗಳನ್ನು ಮರಾಠೀ ಭಾಷೆಯಲ್ಲಿ ರಚಿಸಿದರು. ಮುನಿ ವಿಷಯಿ ಸಂವಾದ ಎಂಬ ಗದ್ಯಗ್ರಂಥವು ಒಬ್ಬ ಮುನಿಗೂ

ವಿಷಯಾಸಕ್ತನಾದ ಯುವಕನಿಗೂ ನಡೆದ ಸಂಭಾಷಣೆಯ ರೂಪದಲ್ಲಿದ್ದು ವೇದಾಂತದ ಮಹತ್ತ್ವವನ್ನು ಚಿತ್ರಿಸುತ್ತದೆ.

ಶೀಗೇಹಳ್ಳಿಯ ಶಿವಾನಂದ ಸ್ವಾಮಿಗಳು ದೇಹವನ್ನು ಬಿಟ್ಟು ಮುಕ್ತರಾದರೆಂಬ ಸುದ್ದಿ ಬಂದಿತು ಅದನ್ನು ಕೇಳಿ ಕ್ಷಣಕಾಲ ಶ್ರೀಧರಸಾಧುಗಳು ದಿಗ್ಭ್ರಾಂತರಾದರು. ಆಮೇಲೆ "ಹುಟ್ಟು ಸಾವುಗಳಿರುವುದು ದೇಹಕ್ಕೆ ಮಾತ್ರ; ಆತ್ಮನು ಶಾಶ್ವತನು. ಜ್ಞಾನಿಯಾಗಿ ಬಾಳಿ ಮುಕ್ತರಾದವರ ವಿಷಯದಲ್ಲಿ ಶೋಕಿಸಬಾರದು" ಎಂದು ಹೇಳಿ ಇಪ್ಪತ್ತೈದು ಶ್ಲೋಕಗಳಲ್ಲಿ "ಶ್ರೀ ಶಿವಗುರು ಸ್ತೋತ್ರ" ಎಂಬ ಕೃತಿಯನ್ನು ರಚಿಸಿ ಕಳಿಸಿದರು. ಈ ಸ್ತೋತ್ರ ಶ್ರೀಧರರು ಸಂಸ್ಕೃದಲ್ಲಿ ರಚಿಸಿದ ಪ್ರಥಮ ಕೃತಿ. ಕೆಲವು ದಿನ ಸಜ್ಜನಗಡದಲ್ಲಿಯೇ ತಪಸ್ಸು ಮಾಡುತ್ತಲಿದ್ದು ಶೀಗೇಹಳ್ಳಿಯ ಕಡೆಗೆ ಹೊರಟರು.

## ಸಂನ್ಯಾಸ ಸ್ವೀಕಾರ

ದಾರಿಯಲ್ಲಿ ಉತ್ತರ ಕನ್ನಡ ಜಿಲ್ಲೆಯ ಯಾಣದಲ್ಲಿ ಕೆಲವು ದಿನವಿದ್ದು ಶಿವರಾತ್ರಿ ಭಜನ ಸಪ್ತಾಹವನ್ನು ಮುಗಿಸಿ ಶೀಗೇಹಳ್ಳಿಗೆ ಬಂದರು. ಶಿವಾನಂದ ಸ್ವಾಮಿಗಳು ಸಮಾಧಿಸ್ಥರಾಗಿ ಎರಡು ವರ್ಷಗಳು ಸಂದಿದ್ದವು. ಮಠಕ್ಕೆ ಹಣಕಾಸಿನ ತೊಂದರೆಯಿತ್ತು. ಶ್ರೀಧರ ಸಾಧುಗಳು ಬಂದೊಡನೆ ಎಲ್ಲ ತೊಂದರೆಗಳೂ ನೀಗಿದವು. ಭಕ್ತ ಜನರಿಂದ ಬೇಕಾದಷ್ಟು ಹಣ ದೊರಕಿತು. ಶಿವಾನಂದ ಸ್ವಾಮಿಗಳ ಸಮಾಧಿ ಮಂದಿರದ ನಿರ್ಮಾಣವಾಯಿತು. ದತ್ತ ಜಯಂತಿ, ರಾಮನವಮಿ, ಶಂಕರ ಜಯಂತಿ, ದಾಸನವಮಿ ಹಾಗೂ ಶಿವಾನಂದರ ಆರಾಧನೆಗಳು ವಿಜೃಂಭಣೆಯಿಂದ ನಡೆಯುತೊಡಗಿದವು. ಅಲ್ಲದೆ ಶ್ರೀಧರರು ವೇದ ಸಂಸ್ಕೃತ ಪಾಠಶಾಲೆಯೊಂದನ್ನು ಅಲ್ಲಿ ಸ್ಥಾಪಿಸಿದರು. ಭಕ್ತಜನರ ಕೋರಿಕೆಯಂತೆ ಮತ್ತೆ ಸಂಚಾರ ಹೊರಟು ಧಾರ್ಮಿಕ ಬೋಧನೆಗಳಿಂದ ಜನರನ್ನು

ತೃಪ್ತಿಗೊಳಿಸುತ್ತ, ಕಡೂರು ಚಿಕ್ಕಮಗಳೂರು ಪ್ರಾಂತ್ಯಗಳಲ್ಲಿ ಪ್ರವಾಸ ಮಾಡಿದರು. ಶೀಗೇಹಳ್ಳಿಯಲ್ಲಿ ಅವರು ಸಂನ್ಯಾಸವನ್ನು ಸ್ವೀಕರಿಸಲೆಂಬುದು ಭಕ್ತಜನರ ಬಹುದಿನಗಳ ಕೋರಿಕೆಯಾಗಿತ್ತು. ಅದಕ್ಕೆ ಶ್ರೀಧರರು ಸಮ್ಮತಿಸಿರಲಿಲ್ಲ. ಒಂದು ದಿನ ಸಮಾಧಿಯಲ್ಲಿದ್ದಾಗ " ಸಂನ್ಯಾಸವನ್ನು ಸ್ವೀಕರಿಸು" ಎಂದು ಶ್ರೀಸಮರ್ಥರ ಆಜ್ಞೆಯಾಯಿತು. ಇದನ್ನು ಶ್ರೀಧರರು ಪ್ರಕಟಿಸಿದಾಗ ಭಕ್ತರೆಲ್ಲರೂ ಆನಂದದಿಂದ ಮೈಮರೆತರು.

ಚಿತ್ರಭಾನು ಸಂವತ್ಸರದ (ಕ್ರಿ.ಶ. 1943) ವಿಜಯದಶಮೀ ಸೋಮವಾರ ಪ್ರಾತಃಕಾಲ ಶೀಗೇಹಳ್ಳಿಯಲ್ಲಿ ಶ್ರೀಧರರು ಶಾಸ್ತ್ರೋಕ್ತವಿಧಿಯಿಂದ ಸಂನ್ಯಾಸವನ್ನು ಸ್ವೀಕರಿಸಿದರು. ಅನಂತರವೂ ತಮ್ಮ ಹೆಸರು ಶ್ರೀಧರ ಎಂದೇ ಇರಲೆಂದು ತಿಳಿಸಿದ್ದರು. ಒಡನೆಯೇ ನೆರೆದಿದ್ದ ಸಾವಿರಾರು ಭಕ್ತಜನರು **"ಶ್ರೀಮತ್ ಪರಮಹಂಸ ಪರಿವ್ರಾಜಕಾಚಾರ್ಯ ಭಗವಾನ್ ಶ್ರೀ ಶ್ರೀಧರ ಸದ್ಗುರು ಮಹಾರಾಜಕೀ ಜಯ"** ಎಂದು ಏಕಕಂಠದಿಂದ ಘೋಷಿಸಿದರು.

ಭಗವಾನ್ ಶ್ರೀಧರಸ್ವಾಮಿಗಳು ಶೀಗೇಹಳ್ಳಿಮಠದ ಪಟ್ಟಾಧಿಕಾರವನ್ನು ಮಾತ್ರ ವಹಿಸಿಕೊಳ್ಳಲೇ ಇಲ್ಲ. ನಾನು ಮಠಾಧಿಪತಿಯಾಗಿ ಕುಳಿತುಕೊಳ್ಳುವುದಿಲ್ಲ ಎಂಬುದು ಅವರ ಪ್ರತಿಜ್ಞೆಯಾಗಿತ್ತು. ಸಂನ್ಯಾಸವಾದ ದಿವಸವೆಲ್ಲ ಸ್ವಾಮಿಗಳು ವೇದಾಂತಾರ್ಥವನ್ನೊಳಗೊಂಡ ಹದಿಮೂರು ಸಂಸ್ಕೃತ ಶ್ಲೋಕಗಳನ್ನು ರಚಿಸಿದರು. ಶಾರ್ದೂಲವಿಕ್ರೀಡಿತ ವೃತ್ತದಲ್ಲಿರುವ ಈ ಸಂಸ್ಕೃತ ಶ್ಲೋಕಗಳ ಪ್ರತಿಯೊಂದು ಕಡೆಯ ಸಾಲು **"ಸರ್ವೇಭ್ಯೋಽಪ್ಯಭಯಂತನೋಮಿಕುಶಲಂ ಬ್ರಹ್ಮಾಭಯಂ ವೈಯತಃ"** ಎಂದಿರುತ್ತದೆ. "ನಾನು ಸಕಲರ ಭಯವನ್ನೂ ಹೋಗಲಾಡಿಸಿ ಕುಶಲವನ್ನುಂಟುಮಾಡುವೆನು. ಏಕೆಂದರೆ, ಬ್ರಹ್ಮವಸ್ತು ಅಭಯ ಎನ್ನಿಸಿದೆ" ಎಂದು ಇದರ ಅಭಿಪ್ರಾಯ. ಅನಂತರ ಶ್ರೀಧರಸ್ವಾಮಿಗಳಿಂದ ಹದಿನೈದು ಪದ್ಯಗಳಿರುವ ಸರಸ್ವತೀ ಸ್ತೋತ್ರವೂ, ಸ್ವಾತ್ಮ ನಿರೂಪಣೆ ಎಂಬ ಗ್ರಂಥವೂ

ರಚಿತವಾದವು.

## ಪರಿವ್ರಾಜಕ

ಪರಿವ್ರಾಜಕ ಎಂಬ ಶಬ್ದಕ್ಕೆ ನಿತ್ಯಸಂಚಾರಿಯೆಂದೂ, ಸಂನ್ಯಾಸಿಯೆಂದೂ ಅರ್ಥವಿದೆ. ನಮ್ಮ ಶ್ರೀಧರಸ್ವಾಮಿಗಳಲ್ಲಿ ಈ ಎರಡು ಅರ್ಥವೂ ಹೊಂದಿ ಕೊಂಡಿತ್ತು. ಸಂನ್ಯಾಸಿಗಳಾದ ಮೇಲೆ ಮತ್ತೆ ಅವರ ನಿತ್ಯಸಂಚಾರ ಪ್ರಾರಂಭವಾಯಿತು. ಸನಾತನಧರ್ಮದ ನಿಜವಾದ ಅರ್ಥವನ್ನು ತಿಳಿಸಿಕೊಡುವುದು, ಜನರನ್ನು ಅಧರ್ಮಮಾರ್ಗದಿಂದ ಬಿಡಿಸಿ ಸನ್ಮಾರ್ಗಕ್ಕೆ ಹಚ್ಚುವುದು, ದೇವರಲ್ಲಿ ನಂಬಿಕೆಯನ್ನು ಹುಟ್ಟಿಸಿ ಭಕ್ತಿ ಮಾರ್ಗವನ್ನು ಬೆಳೆಸುವುದು, ಸ್ತ್ರೀಯರಿಗೆ ಸಾಧ್ವಿಗಳಾಗಿ ಬಾಳುವ ದಾರಿಯನ್ನು ತೋರಿಸಿಕೊಡುವುದು, ಗುರುಹಿರಿಯರಲ್ಲಿ ವಿನಯದಿಂದ ವರ್ತಿಸುತ್ತ ಶಿಸ್ತನ್ನು ಪಾಲಿಸುವಂತೆ ವಿದ್ಯಾರ್ಥಿಗಳಿಗೆ ಬೋಧಿಸುವುದು – ಇವೇ ಅವರ ಸಂಚಾರದ ಮುಖ್ಯ ಉದ್ದೇಶಗಳಾಗಿದ್ದವು. ಅವರು ಕನ್ನಡನಾಡಿನ ಎಲ್ಲ ಪ್ರದೇಶಗಳಲ್ಲಿಯೂ ವಿಶೇಷವಾಗಿ ಸಂಚರಿಸಿದರು. ರಾಮೇಶ್ವರದಿಂದ ಬದರೀಕ್ಷೇತ್ರದವರೆಗೆ ಭರತಖಂಡದಲ್ಲಿ ಹಲವು ಬಾರಿ ಸುತ್ತಿದರು. ಸಜ್ಜನಗಡಕ್ಕೆ ಮತ್ತೆ ಮತ್ತೆ ಹೋದರು. ಮೇಲ್ಕಂಡ ಉದ್ದೇಶಗಳಿಗೆ ಅನುಸಾರವಾಗಿ ಪ್ರವಚನ ಮಾಡುವುದು ಎಲ್ಲೆಡೆಯೂ ನಡೆಯಿತು. ಕನ್ನಡ, ಮರಾಠಿ, ಉರ್ದು, ಹಿಂದಿ, ಇಂಗ್ಲಿಷ್ ಭಾಷೆಗಳು ಸ್ವಾಧೀನವಾದ್ದರಿಂದ ಆಯಾಪ್ರಾಂತ್ಯಗಳಲ್ಲಿ ಅವರಿಗೆ ಬೇಕಾದ ಭಾಷೆಗಳಲ್ಲಿ ಉಪನ್ಯಾಸ ನೀಡುತ್ತಿದ್ದರು. ಈ ಸಮಯದಲ್ಲಿ ಅನೇಕ ಗ್ರಂಥಗಳನ್ನು ಅವರು ರಚಿಸಿದರು. ಭಕ್ತಿ–ಜ್ಞಾನ–ಭಾರತೀಯ ಸಂಸ್ಕೃತಿ – ಇವೇ ಆ ಗ್ರಂಥಗಳಲ್ಲಿ ಕಾಣಬರುವ ವಿಷಯಗಳು. ಶ್ರೀಧರ ಸ್ವಾಮಿಗಳು ರಚಿಸಿದ ಗ್ರಂಥಗಳ ಒಂದು ಪಟ್ಟಿಯನ್ನು ಈ ಪುಸ್ತಕದ ಕಡೆಯಲ್ಲಿ ಕೊಟ್ಟಿದೆ.

ದಿನದಿನವೂ ಶ್ರೀಧರಸ್ವಾಮಿಗಳ ಭಕ್ತರ ಸಂಖ್ಯೆ ಹೆಚ್ಚುತ್ತ ಹೋಯಿತು.

ಅನೇಕ ನಾಸ್ತಿಕ ಜನರು ಬಂದು ಪ್ರಶ್ನೆಗಳನ್ನು ಹಾಕಿ ಶ್ರೀಗಳವರ ಉತ್ತರದಿಂದ ತೃಪ್ತಿಗೊಂಡು ಆಸ್ತಿಕರಾದರು. ನಿರಾಶರಾಗಿದ್ದ ಜನರಿಗೆ ಜೀವನದಲ್ಲಿ ಒಂದು ಆಶಾಕಿರಣವು ಕಂಡುಬಂದು ಶ್ರೀಗಳವರ ಉಪದೇಶದಂತೆ ನಡೆಯತೊಡಗಿದರು. ಸನಾತನವಾದ ವೈದಿಕ ಧರ್ಮದ ಮೇಲ್ಮೆ ಏನೆಂಬುದು ಜನರಿಗೆ ಅರಿವಾಯಿತು. ಬಾಳಿನಲ್ಲಿ ಶಾಂತಿಯಿಲ್ಲದೆ ಕೊರಗುತ್ತಿದ್ದ ಹೆಣ್ಣುಮಕ್ಕಳಿಗೆ – ವಿಶೇಷವಾಗಿ ವಿಧವೆಯರಿಗೆ – ಶ್ರೀಗಳವರ ಅಮೃತವಾಣಿಯಿಂದ ಶಾಂತಿ ಲಭಿಸಿತು. ಬಹುಮಂದಿ ಯುವಕರು ತಮ್ಮ ಕೆಟ್ಟ ಚಟಗಳನ್ನು ಬಿಟ್ಟುಬಿಟ್ಟರು. ಸಂದೇಹದಿಂದ ದಾರಿ ಕಾಣದ ಸಾಧಕರು ಸರಿಯಾದ ದಾರಿಯನ್ನು ಕಂಡುಕೊಂಡರು. ಮಂಕಾಗಿ ಉರಿಯುತ್ತಿದ್ದ ಆರ್ಯ ಸಂಸ್ಕೃತಿಯ ನಂದಾದೀವಿಗೆಗೆ ಶ್ರೀಧರಸ್ವಾಮಿಗಳು ಎಣ್ಣೆಯನ್ನು ತುಂಬಿ ಪ್ರಜ್ವಲಿಸುವಂತೆ ಮಾಡಿದರು. ಅವರ ಸನ್ನಿಧಿಗೆ ಹೋದ ಪ್ರತಿಯೊಬ್ಬರಿಗೂ ತಾವು ಸನ್ಮಾರ್ಗದಲ್ಲಿ ನಡೆಯಬೇಕೆಂದೂ, ಪುಣ್ಯಜೀವನವನ್ನು ನಡೆಸಬೇಕೆಂದೂ ಹಂಬಲವುಂಟಾಗುತ್ತಿತ್ತು. ಬಹುಜನರು ಆಸ್ತಿಕರಾದರು. ಕೆಲವರು ಅಧ್ಯಾತ್ಮ ಮಾರ್ಗದಲ್ಲಿ ಮುಂದುವರಿದರು. ಕೆಲವರು ಕೆಲಸಕ್ಕೆ ಬಾರದ ಪುಸ್ತಕಗಳನ್ನೋದುವುದನ್ನು ಬಿಟ್ಟು ಜೀವನಕ್ಕೆ ಬೆಳಕನ್ನು ನೀಡುವ ಉತ್ತಮ ಗ್ರಂಥಗಳ ಅಭ್ಯಾಸವನ್ನಾರಂಭಿಸಿದರು.

ಶ್ರೀಧರ ಸ್ವಾಮಿಗಳು ಬಡಜನರ ವಿಷಯದಲ್ಲಿ ಕರುಣಾಳುವೇ ಆಗಿದ್ದರು. ಹೊಟ್ಟೆ ಬಟ್ಟೆಗಿಲ್ಲದ ಅವರ ಸ್ಥಿತಿಯನ್ನು ಕಂಡು ತುಂಬ ಮರುಗುತ್ತಿದ್ದರು. ಅದಕ್ಕಾಗಿ ಒಂದು ನಿಯಮವನ್ನು ಜಾರಿಗೆ ತಂದರು. ಏನೆಂದರೆ, ಪಾದಪೂಜೆ–ಉತ್ಸವ–ಭಜನಸಪ್ತಾಹ–ಯಜ್ಞ–ಮುಂತಾದವುಗಳಿಗೆ ಶ್ರೀಮಂತರಾದ ಭಕ್ತರು ಶ್ರೀಗಳವರನ್ನು ಆಹ್ವಾನಿಸುತ್ತಿದ್ದರು. ಅಂತಹ ಸ್ಥಳಗಳಲ್ಲಿ ಬೇಕಾದಷ್ಟು ಅನ್ನ ಸಂತರ್ಪಣೆ ನಡೆಯುತ್ತಿತ್ತು. ಅಲ್ಲಿ ಎಲ್ಲಾ ವರ್ಗದ ಜನರು ಮಾತ್ರವೇ ಅಲ್ಲದೇ ಬಡಜನರು, ಭಿಕ್ಷುಕರು, ಕೂಲಿಯವರು, ರೋಗಿಗಳು– ಮೊದಲಾದ

ಬಹುಮಂದಿ ಶ್ರೀಗಳವರ ದರ್ಶನಕ್ಕಾಗಿ ಬರುತ್ತಿದ್ದರು. ಅವರೆಲ್ಲರಿಗೂ ತಾರತಮ್ಯವಿಲ್ಲದೆ ಭೋಜನವನ್ನು ಮಾಡಿಸುವುದಾದರೆ ಮಾತ್ರ ತಾವು ಬರುತ್ತೇವೆ ಎಂಬುದೇ ಶ್ರೀಧರಸ್ವಾಮಿಗಳ ನಿಯಮ. ಉತ್ಸವ ಸಮಯದಲ್ಲಿ ಕೆಲವರಿಗೆ ಊಟ – ಕೆಲವರಿಗೆ ಉಪವಾಸ ಎಂಬುದು ಮೃದು ಮನಸ್ಸಿನ ಇವರಿಗೆ ಹಿಡಿಸುತ್ತಿರಲಿಲ್ಲ. ಅವರ ನೇತೃತ್ವದಲ್ಲಿ ಎಷ್ಟೋ ಯಜ್ಞಕಾರ್ಯಗಳೂ ನಡೆದವು. ಅಂತಹ ಸಂದರ್ಭದಲ್ಲಿ ಬಡಜನರಿಗೆ ಕಂಬಳಿ, ಪಂಚೆ, ಸೀರೆ – ಮೊದಲಾದವನ್ನೂ ಕೊಡಬೇಕೆಂದು ತಿಳಿಸುತ್ತಿದ್ದರು. ಹೀಗೆ ಶ್ರೀಮಂತರಿಂದ ಮತ್ತು ಸಂಘ ಸಂಸ್ಥೆಗಳಿಂದ ಶ್ರೀಧರ ಸ್ವಾಮಿಗಳು ಬಡಜನರಿಗೆ ಕೊಡಿಸಿದ ವಸ್ತ್ರಗಳು ಲಕ್ಷಗಟ್ಟಲೆ ಆಗಿರಬಹುದು. ಅವರು ಎಲ್ಲಿ ಹೋದರೂ ಅಪಾರವಾದ ಕಾಣಿಕೆಗಳು ಬಂದು ಬೀಳುತ್ತಿದ್ದವು. ಸುವರ್ಣವೃಷ್ಟಿಯೇ ಆಗುತ್ತಿತ್ತು. ಅವೆಲ್ಲವನ್ನೂ ಕೈ ನೀಡಿದವರಿಗೆ ಕೊಡಿಸುತ್ತ ಹೋದರೇ ಹೊರತು ತಮ್ಮ ಕೈಯಿಂದ ಒಂದು ಬಿಡಿಗಾಸನ್ನೂ ಮುಟ್ಟುತ್ತಿರಲಿಲ್ಲ. ಎಷ್ಟು ಬಂದಿತು, ಎಷ್ಟು ಖರ್ಚಾಯಿತು ಎಂಬುದು ಅವರಿಗೆ ತಿಳಿಯುತ್ತಲೇ ಇರಲಿಲ್ಲ!. ಹಣವನ್ನು ಹುಲ್ಲಿಗಿಂತ ಕಡೆಯಾಗಿ ಕಾಣುವ ಇಂತಹ ಸಂನ್ಯಾಸಿಯನ್ನು ಜನರು ಕಂಡಿರಲಿಲ್ಲ. ಶ್ರೀಧರಸ್ವಾಮಿಗಳಿಗೆ ಕಾಣಿಕೆಯನ್ನು ಅರ್ಪಿಸಿದರೆ ನಾವು ಧನ್ಯರಾದೆವೆಂದು ಜನರು ತಿಳಿದುಕೊಂಡರು.

ಭಗವಾನ್ ಶ್ರೀಧರಸ್ವಾಮಿಗಳು ತಮ್ಮ ಸಂಚಾರಕಾಲದಲ್ಲಿ ಜೀರ್ಣವಾದ ಎಷ್ಟೋ ದೇವಸ್ಥಾನಗಳನ್ನು ಸರಿಪಡಿಸಿ ಯೋಗ್ಯ ರೀತಿಯಲ್ಲಿ ಪೂಜೆ ನಡೆಯುವಂತೆ ಏರ್ಪಡಿಸಿದರು. ವೇದ-ಸಂಸ್ಕೃತ ಪಾಠಶಾಲೆಗಳನ್ನು ಸ್ಥಾಪಿಸಿದರು. ಗೋಶಾಲೆಗಳನ್ನು ನಿರ್ಮಿಸಿದರು. ಧರ್ಮೋಪನಯನಗಳನ್ನು ನಡೆಸಿದರು. ಅವರ ಮಾತೆಂದರೆ ಭಗವಂತನ ಆಜ್ಞೆಯೆಂಬ ನಂಬಿಕೆ ಜನರಲ್ಲಿ ಮೂಡಿತು. ಅಣ್ಣ- ತಮ್ಮಂದಿರ, ತಂದೆ – ಮಕ್ಕಳ , ಗಂಡ – ಹೆಂಡತಿಯ ಜಗಳದಲ್ಲಿ ತೀರ್ಪು ಹೇಳುವ

ಕೆಲಸವೂ ಸಹ ಶ್ರೀಗಳವರಿಗೆ ಗಂಟು ಬೀಳುತ್ತಿತ್ತು. ಅವರ ತಕರಾರನ್ನು ಸಾವಧಾನವಾಗಿ ಆಲಿಸಿ ಧರ್ಮಕ್ಕೆ ಅನುಸಾರವಾಗಿ ಒಂದೇ ಮಾತಿನಿಂದ ತೀರ್ಪು ಹೇಳಿಬಿಡುತ್ತಿದ್ದರು. ಎದುರು ಹೇಳದೆ ಅವರ ತೀರ್ಪನ್ನು ಎಲ್ಲರೂ ಪಾಲಿಸುತ್ತಿದ್ದರು. ಹೀಗೆ ಶ್ರೀಧರ ಭಗವಾನರು ತಮಗೆ ನಿಲ್ಲುವುದಕ್ಕೆ ನೆಲೆಯಿಲ್ಲದಿದ್ದರೂ ಅಖಂಡ ಭರತಖಂಡವೇ ತಮ್ಮ ಆಶ್ರಮವೋ ಎಂಬಂತೆ ಸುತ್ತಾಡಿದರು. ಸಂನ್ಯಾಸ ಸ್ವೀಕಾರವಾದ ಬಳಿಕ ಸುಮಾರು ಒಂಬತ್ತು ವರ್ಷಗಳ ಕಾಲ ಪರಿವ್ರಾಜಕರಾಗಿ ತಿರುಗಾಡಿದರು.

## ವದ್ದಳ್ಳಿ- ವರದಪುರವಾಯಿತು

ಸಾಗರಕ್ಕೆ ಸುಮಾರು ನಾಲ್ಕು ಮೈಲಿಗಳ ದೂರದಲ್ಲಿರುವ ವರದಹಳ್ಳಿ (ವದ್ದಳ್ಳಿ) ಎಂಬುದು ಒಂದು ಚಿಕ್ಕ ಗ್ರಾಮ. ಯಾರ ಗಮನವನ್ನೂ ಇದು ಸೆಳೆದಿರಲಿಲ್ಲ. ಸುತ್ತಲೂ ಬೆಟ್ಟಗಳು ! ದೊಡ್ಡ ಕಾಡು, ಎತ್ತರವಾಗಿ ಬೆಳೆದ ಹೆಮ್ಮರಗಳು. ಬೆಟ್ಟಗಳ ನಡುವೆ ಹಳ್ಳಿಗರು ಬೆಳೆಸಿದ ಅಡಿಕೆ ತೋಟ-ಭತ್ತದ ಚಿಕ್ಕ ಗದ್ದೆಗಳು. ಇಲ್ಲಿರುವ ಜಗದಾಂಬ ಮಂದಿರ ಪ್ರಾಚೀನವಾದುದು. ಬೆಟ್ಟದಲ್ಲಿರುವ ಒಂದು ಉದ್ದವಾದ ದೊಡ್ಡ ಗುಹೆಯನ್ನು ವ್ಯಾಸಗುಹೆ ಎನ್ನುತ್ತಾರೆ. ವ್ಯಾಸರೂ, ಅಗಸ್ತ್ಯರೂ ಅಲ್ಲಿ ತಪಸ್ಸು ಮಾಡಿದರೆಂದು ಜನರ ಹೇಳಿಕೆ. ಹಿಂದೆ ಇಲ್ಲೊಂದು ಸಂನ್ಯಾಸಿ ಮಠವಿದ್ದು ಉತ್ತರಾಧಿಕಾರಿಯಿಲ್ಲದೆ ಹಾಳುಬಿದ್ದಿತ್ತು. ದೇವೀತೀರ್ಥ, ಅಗಸ್ತ್ಯತೀರ್ಥ ಎಂಬ ಎರಡು ಕೊಳಗಳಿದ್ದವು. ಶ್ರೀಧರಸ್ವಾಮಿಗಳು ಧರ್ಮಜಾಗೃತಿಗಾಗಿ ಸಂಚಾರ ಮಾಡುತ್ತ ಕ್ರಿ.ಶ.1953ನೇ ವರ್ಷದಲ್ಲಿ ಇಲ್ಲಿಗೆ ಆಗಮಿಸಿದರು. ಸುತ್ತಲ ಪರಿಸರವನ್ನು ವೀಕ್ಷಿಸಿದ ಶ್ರೀಗಳವರಿಗೆ ಅದೇನು ಹೊಳೆಯಿತೋ, "ಇದು ಪವಿತ್ರವಾದ ಸ್ಥಳ. ಹಿಂದೆ ಋಷಿಗಳು ತಪಸ್ಸು ಮಾಡುತ್ತಿದ್ದ ಪುಣ್ಯಕ್ಷೇತ್ರ, ಇಲ್ಲಿ ಆಶ್ರಮವನ್ನು ಸ್ಥಾಪಿಸಬೇಕು" ಎಂದು ನಿರ್ಧರಿಸಿದರು. ತಮ್ಮ ನಿರ್ಧಾರವನ್ನು ಶಿಷ್ಯಜನರಿಗೆ ತಿಳಿಸಿದರು; ಶಿಷ್ಯರಾದ ಮಹಾಜನರು ಸಭೆ ಸೇರಿ, ಮುಂದಿನ ಕಾರ್ಯಕ್ರಮವನ್ನು

ಗೊತ್ತು ಮಾಡಿದರು. ಹಣವು ಹೊಳೆಯಾಗಿ ಹರಿದು ಬರಲಾರಂಭಿಸಿತು.

ಮೊದಲು ಜಗದಾಂಬಾ ದೇವಾಲಯದ ಹಿಂಬದಿಯಲ್ಲಿರುವ ಬೆಟ್ಟದ ಮೇಲೆ ಒಂದು ಕುಟೀರದ ನಿರ್ಮಾಣವಾಯಿತು. ಅದಕ್ಕೆ "ಶ್ರೀಧರಾಶ್ರಮ" ಎಂದು ಹೆಸರಿಡಲಾಯಿತು. ಕ್ರಿ.ಶ. 1954 ರಲ್ಲಿ ಶ್ರೀಧರ ಭಗವಾನರ ಚಾತುರ್ಮಾಸ್ಯ ಈ ಕುಟೀರದಲ್ಲಿ ನಡೆಯಿತು. ಇದೇ ವರ್ಷದ ವಿಜಯದಶಮಿಯಂದು ವಿಶ್ವಧರ್ಮದ ಉದ್ಧಾರದ ಪ್ರತೀಕವಾಗಿ ಬೆಟ್ಟದ ಮೇಲೆ ಪಂಚಲೋಹ ನಿರ್ಮಿತವಾದ ಧರ್ಮಧ್ವಜವನ್ನು ಸ್ಥಾಪಿಸಿದರು. ಶೀಗೇಹಳ್ಳಿಯ ಶ್ರೀ ಶಿವಾನಂದಸ್ವಾಮಿಗಳು ಹೇಳಿದ ಭವಿಷ್ಯ ನಿಜವಾಯಿತು. ಶ್ರೀಗಳವರು ಜಗದಂಬಾ ದೇವಾಲಯುದ ಜೀರ್ಣೋದ್ಧಾರವನ್ನು ಮಾಡಿ ಅಷ್ಟಬಂಧವನ್ನು ನಡೆಸಿದರು. ತ್ರಿಕಾಲದಲ್ಲಿಯೂ ಪೂಜೆ ನಡೆಯುವಂತೆ ಏರ್ಪಡಿಸಿದರು.

ಮಹಾತ್ಮರು ನೆಲೆಸಿದ ಸ್ಥಳವೇ ಯಾತ್ರಾಸ್ಥಳವಾಗುತ್ತದೆ. ಶ್ರೀಧರಸ್ವಾಮಿಗಳು ಇಲ್ಲಿ ವಾಸಮಾಡಲಾರಂಭಿಸಿದೊಡನೆ ವರ್ದಳ್ಳಿಯ ಪರಿಸರ "ಶ್ರೀಕ್ಷೇತ್ರ ವರದಪುರ" ಎಂದು ಪ್ರಸಿದ್ಧವಾಯಿತು. ನೂರಾರು, ಸಾವಿರಾರು ಸಂಖ್ಯೆಯಲ್ಲಿ ಯಾತ್ರಿಕರು ಬರಲಾರಂಭಿಸಿದರು. ಯಾತ್ರಿಕರ ಸೌಕರ್ಯಕ್ಕಾಗಿ ಚಂದ್ರಶಾಲೆ, ಪಾಕಶಾಲೆ, ವಿಶ್ರಾಂತಿಸ್ಥಾನ, ಕಾರ್ಯಾಲಯಗಳ ನಿರ್ಮಾಣವಾಯಿತು. ವಿಶಾಲವಾದ ಒಂದು ಗೋಶಾಲೆಯನ್ನು ಕಟ್ಟಿಸಿದ್ದಾಯಿತು. ವೇದ ಸಂಸ್ಕೃತಿ ಪಾಠಶಾಲೆಯನ್ನು ಸ್ಥಾಪಿಸಲಾಯಿತು. ಪುರಾಣ-ಪ್ರವಚನ, ಹರಿಕಥೆ, ಧಾರ್ಮಿಕ ಉಪನ್ಯಾಸಗಳು ನಡೆಯಲಾರಂಭಿಸಿದವು. ಬಗೆಬಗೆಯ ಉತ್ಸವಗಳು ನಡೆದವು. ಲೋಕಕಲ್ಯಾಣಕ್ಕಾಗಿ ವಿವಿಧ ಹೋಮಗಳೂ, ಯಜ್ಞಗಳೂ ಆದವು. ಯಾತ್ರೆಗೆ ಬರುವ ಬಡವರಿಗೂ ಬಲ್ಲಿದರಿಗೂ ಯಾವ ಭೇದವೂ ಇಲ್ಲದಂತೆ ಊಟ ಉಪಚಾರಗಳ ವ್ಯವಸ್ಥೆಯಾಯಿತು. ವರದಹಳ್ಳಿಯ ದಿಶೆಯೇ ಬದಲಾಯಿಸಿ ಹೋಯಿತು. "ಶ್ರೀಧರ ಸಂದೇಶ' ಎಂಬ

ಮಾಸಪತ್ರಿಕೆ ಜನ್ಮ ತಳೆಯಿತು.

ಶ್ರೀಧರ ಕುಟೀರದ ಬಳಿ ಶ್ರೀರಾಮ ದೇವಾಲಯವಿದೆ. ಶ್ರೀರಾಮನು ಶ್ರೀಧರಸ್ವಾಮಿಗಳ ಆರಾಧ್ಯ ದೇವತೆ. ಅದರ ಪಕ್ಕದಲ್ಲಿ ದೇವೀತೀರ್ಥವೆಂಬ ಸೊಗಸಾದ ಕೊಳವಿದೆ. ಬೆಟ್ಟದ ಮೇಲೆ ಹಲವಾರು ಕುಟೀರಗಳು ನಿರ್ಮಾಣವಾಗಿವೆ. ವದ್ದಳ್ಳಿಯು ವರದಹಳ್ಳಿಯಾಗಿ ವರದಪುರ ಕ್ಷೇತ್ರವೆನಿಸಿ, ಶ್ರೀಧರ ಸ್ವಾಮಿಗಳ ತಪೋಭೂಮಿಯಾಯಿತು. ತಮ್ಮ ಪ್ರಸಿದ್ಧ ಗ್ರಂಥವಾದ "ಆರ್ಯ ಸಂಸ್ಕೃತಿ" ಯನ್ನು ಶ್ರೀಗಳವರು ರಚಿಸಿದ್ದು ಇಲ್ಲಿಯೇ.

ವರದಹಳ್ಳಿಯಲ್ಲಿ ಆಶ್ರಮವನ್ನು ಸ್ಥಾಪಿಸಿದ ಮೇಲೂ, ಶ್ರೀಧರಸ್ವಾಮಿಗಳ ಸಂಚಾರವೂ ಕಾರ್ಯತತ್ಪರತೆಯೂ ನಿಲ್ಲಲಿಲ್ಲ. ತಮ್ಮ ಗುರುಸ್ಥಾನವಾದ ಸಜ್ಜನಗಡದ ಮಂದಿರದ ಜೀರ್ಣೋದ್ಧಾರವನ್ನೂ ಕೈಗೊಂಡರು. ಶ್ರೀಗಳವರ ಭಕ್ತರೇ ಸಂಚಾಲಕರಾಗಿ ನಿಂತು "ಶ್ರೀ ಸಮರ್ಥ ಸೇವಾ ಮಂಡಳಿ" ಎಂಬ ಸಂಘವನ್ನು ರಚಿಸಿಕೊಂಡಿದ್ದರು. ಶ್ರೀಧರಸ್ವಾಮಿಗಳು ಅದಕ್ಕೆ ಹಣವನ್ನು ಒದಗಿಸಿಕೊಟ್ಟು ಸಂಘದ ಉದ್ದೇಶವು ಸಾರ್ಥಕವಾಗುವಂತೆ ಮಾಡಿದರು. ಉತ್ಸವಗಳು ವೈಭವದಿಂದ ಜರುಗತೊಡಗಿದವು. ದಾಸಬೋಧ ಮೊದಲಾದ ಧಾರ್ಮಿಕ ಗ್ರಂಥಗಳ ಪ್ರವಚನ ಭರದಿಂದ ಸಾಗಿತ್ತು. ಹಾಗೆಯೇ ತಾವು ಸಂನ್ಯಾಸವನ್ನು ಸ್ವೀಕರಿಸಿದ ಶೀಗೆಹಳ್ಳಿಯಲ್ಲಿನ ವ್ಯವಸ್ಥೆಯನ್ನೂ ಉತ್ತಮಪಡಿಸಿದರು. ಹೊನ್ನಾವರದ ಸಮೀಪದಲ್ಲಿ ಅರಣ್ಯವಾಸಿಯಾದ ಶ್ರೀ ಕರಿಕಾನದೇವಿಯು ಶ್ರೀ ಶಿವಾನಂದ ಗುರುಗಳ ಕುಲದೇವಿ. ಅವರು ಆ ದೇವಾಲಯದಲ್ಲಿ ಬಹುಕಾಲ ತಪಸ್ಸು ಮಾಡಿದ್ದರು. ಆ ದೇವಾಲಯವನ್ನು ಲಕ್ಷಾಂತರ ರೂಪಾಯಿಗಳ ಖರ್ಚಿನಿಂದ ಉತ್ತಮಪಡಿಸಿದರು. ಹೊನ್ನಾವರದ ಬಳಿ ಶ್ರೀರಾಮತೀರ್ಥದಲ್ಲಿ ಶ್ರೀದತ್ತ ಮಂದಿರವನ್ನು ಸ್ಥಾಪಿಸಿದರು. ಭಗವಾನ್ ಶ್ರೀಧರಸ್ವಾಮಿಗಳು ಎಲ್ಲಿದ್ದರೂ

ಸಕ್ಕರೆಗೆ ಇರುವೆ ಮುತ್ತುವಂತೆ ಜನರು ಮುತ್ತಿಕೊಳ್ಳುತ್ತಿದ್ದರು. ಗಂಡಸರು, ಹೆಂಗಸರು, ಮಕ್ಕಳು, ಮುದುಕರು, ಸಕಲಜಾತಿಯವರೂ ಸೇರುತ್ತಿದ್ದರು. ಈ ಜನರ ಉದ್ದೇಶ ಬೇರೆ ಬೇರೆ. ಶ್ರೀಗಳವರ ಉಪದೇಶವಾಣಿಯಿಂದ ತಮ್ಮ ಅಧ್ಯಾತ್ಮ ಜ್ಞಾನವನ್ನು ಬೆಳೆಸಿಕೊಳ್ಳಬೇಕೆಂಬುವರು ಕೆಲವರು. ಅವರು ಕೊಡುವ ತೀರ್ಥದಿಂದ ಪವಿತ್ರರಾಗುತ್ತೇವೆಂದು ತಿಳಿದವರು ಕೆಲವರು. ಅವರ ದರ್ಶನ ಮಾತ್ರದಿಂದ ಧನ್ಯರಾಗುತ್ತೇವೆಂದು ಭಾವಿಸಿದವರು ಹಲವರು. ಅವರ ಸೇವಾಕಾರ್ಯವನ್ನು ಮಾಡಬೇಕೆಂಬ ಆಸೆಯುಳ್ಳ ಭಕ್ತರು ಅನೇಕರು. ಇನ್ನು ಶ್ರೀಧರಸ್ವಾಮಿಗಳಿದ್ದಲ್ಲಿ ಅನ್ನಪೂರ್ಣೆಯೇ ಪ್ರತ್ಯಕ್ಷಳಾಗುವುದರಿಂದ ಬೇಕಾದಷ್ಟು ಊಟ ಸಿಗುವುದೆಂದು ಬರತಕ್ಕವರೂ ಇದ್ದರು!. ಹಣ, ಬಟ್ಟೆಗಳ ಆಸೆಯಿಂದ ಬರತಕ್ಕವರೂ ಬಹುಮಂದಿ ಇದ್ದರು!.

ಇನ್ನೂ ಒಂದು ವಿಶೇಷವಿದ್ದಿತು. ಶ್ರೀಧರಸ್ವಾಮಿಗಳು ಕೊಡುವ ತೀರ್ಥದ ಸೇವನೆಯಿಂದ ನಾನಾಬಗೆಯ ರೋಗಗಳು ಗುಣವಾಗುತ್ತವೆಯೆಂದೂ, ಭೂತಪ್ರೇತಗಳ ಕಾಟ ಹೋಗುವುದೆಂದೂ ಪ್ರತೀತಿ ಇತ್ತು. ಇದಕ್ಕಾಗಿ ಬರುತ್ತಿದ್ದ ಜನರೇ ಅಧಿಕ. ಭಕ್ತಿ ಶ್ರದ್ಧೆಗಳಿಗೆ ತಕ್ಕ ಫಲವೆಂಬಂತೆ ಸಾವಿರಾರು ಜನರಿಗೆ ಪ್ರಯೋಜನವು ಇದರಿಂದಾಯಿತು. ವೈದ್ಯರೂ, ಮಂತ್ರವಾದಿಗಳೂ ಮಾಡತಕ್ಕ ಕೆಲಸವನ್ನು ಸಂನ್ಯಾಸಿಗಳಾದ ಶ್ರೀಧರಸ್ವಾಮಿಗಳು ಕೈಗೊಂಡರೇಕೆ? ಈ ಪ್ರಶ್ನೆಯನ್ನು ನೇರವಾಗಿ ಶ್ರೀಗಳವರಿಗೆ ಕೆಲವರು ಹಾಕಿದ್ದಾರೆ. ಅದಕ್ಕೆ ಉತ್ತರವಾಗಿ ಭಗವಾನರು ಹೇಳಿದ್ದೇನೆಂದರೆ: “ನಿಜ, ಧರ್ಮ ಜಾಗೃತಿಯನ್ನು ಮಾಡುವುದೂ, ಪರಮಾರ್ಥದ ಸಾಧಕರಿಗೆ ದಾರಿಯನ್ನು ತೋರಿಸುವುದೂ ನನ್ನ ಕರ್ತವ್ಯ. ಕತ್ತಲೆಯಿಂದ ಬೆಳಕಿಗೆ ತಳ್ಳುವ ಕಾರ್ಯ ಸೂರ್ಯನಿಗೆ ಸೇರಿದಂತೆ, ಅಜ್ಞಾನದಿಂದ ಜ್ಞಾನಮಾರ್ಗಕ್ಕೆ ಕರೆದೊಯ್ಯುವುದು ಜ್ಞಾನಿಯ ಕರ್ತವ್ಯ. ನಾನು ವೈದ್ಯನೂ ಅಲ್ಲ, ಮಂತ್ರವಾದಿಯೂ ಅಲ್ಲ. ಈ ಮುಗ್ಧ ಸ್ವಭಾವದ ಜನರು ಏನೋ

ಒಂದು ನಂಬಿಕೆಯಿಂದ ತಾವಾಗಿ ಬರುತ್ತಾರೆ. ಅವರ ನಂಬಿಕೆಗೆ ತಕ್ಕಂತೆ ಭಗವಂತನ ಕಾರುಣ್ಯದಿಂದ ಅವರ ಬಾಧೆ ನೀಗುತ್ತದೆ. ಅವರ ಕಷ್ಟವು ಹೋಗಿ ಸಂತೋಷವಾಗುವುದಾದರೆ ನಾನೇಕೆ ಅಡ್ಡಿಪಡಿಸಬೇಕು? ಈ ಕಾರಣದಿಂದಲಾದರೂ ಜನರಿಗೆ ದೈವಭಕ್ತಿಯುಂಟಾಗಿ ಧರ್ಮದಲ್ಲಿ ಆಸಕ್ತಿ ಬೆಳೆದೀತು. ಎಲ್ಲರೂ ಜ್ಞಾನಕ್ಕೆ ಅಧಿಕಾರಿಗಳಾಗಿರುವುದಿಲ್ಲ. ಧಾರ್ಮಿಕ ಬೋಧನೆಗಳನ್ನು ಅರ್ಥಮಾಡಿಕೊಳ್ಳುವಷ್ಟು ತಿಳಿವಳಿಕೆಯೂ ಬಹಳ ಜನರಿಗೆ ಇಲ್ಲ. ದೇವರಲ್ಲಿ, ಗುರು ಹಿರಿಯರಲ್ಲಿ ಈ ಜನರಿಗೆ ನಂಬಿಕೆ ಬೆಳೆದರೆ ಸಾಕು. ಅದು ಮೂಢಭಕ್ತಿಯಾದರೂ ಚಿಂತೆ ಇಲ್ಲ. ಕಾಲಕ್ರಮದಲ್ಲಿ ಅದೇ ಒಳ್ಳೆಯ ಮಾರ್ಗಕ್ಕೆ ಒಯ್ಯುತ್ತದೆ."

ಜನರು ಒಂದೇ ಸಮನಾಗಿ ಮುತ್ತುವುದರಿಂದ ಸ್ವಾಮಿಗಳಿಗೆ ಬಹಳ ಶ್ರಮವಾಗುತ್ತಿತ್ತು. ಅವರೊಡನೆ ಮಾತಾಡಿ, ಮಾತಾಡಿ, ಕಷ್ಟಗಳಿಗೆ ಪರಿಹಾರವನ್ನು ಹೇಳಿ ಹೇಳಿ ಸಾಕಾಗಿ ಹೋಗುತ್ತಿತ್ತು. ಹಸಿವು, ಬಾಯಾರಿಕೆ, ನಿದ್ರೆಗಳನ್ನು ತೊರೆದು ಸತತವಾಗಿ ಜನರ ನಡುವೆ ಇರಬೇಕಾಗುತ್ತಿತ್ತು. ಶ್ರೀಧರಸ್ವಾಮಿಗಳ ಶ್ರಮ ಸಹಿಷ್ಣುತೆ, ಶಾಂತಿ, ಸೌಮ್ಯ ಸ್ವಭಾವ – ಅಸಾಧಾರಣವಾದದ್ದು. ಎಂತಹ ಸಂದರ್ಭದಲ್ಲಿಯೂ ಅವರು ಕೋಪಿಸಿಕೊಂಡದ್ದಿಲ್ಲ. ಆಯಾಸದಿಂದ ಎದ್ದು ಹೋದದ್ದಿಲ್ಲ. ಯಾರು ಏನೇ ಹೇಳಲಿ ಎಲ್ಲರೊಡನೆಯೂ ಮಾತಾಡುವಾಗ "ಅಣ್ಣ, ತಮ್ಮ, ತಂಗಿ, ಅಕ್ಕ, ಅಪ್ಪ" ಎಂಬ ಶಬ್ದಗಳನ್ನು ಬಳಸಿ ಸೌಮ್ಯಸ್ವರದಿಂದ ಹೇಳುತ್ತಿದ್ದರು.

## ಸಿದ್ಧಿ

ಸಂನ್ಯಾಸವನ್ನು ಸ್ವೀಕರಿಸಿದ ಮೇಲೆ ಸುಮಾರು ಇಪ್ಪತ್ತಾರು ವರ್ಷಗಳು ಗತಿಸಿದವು. ಒಬ್ಬ ಮನುಷ್ಯನು ಧರ್ಮ ಜಾಗೃತಿಗಾಗಿ ಏನೇನು ಮಾಡಲು ಸಾಧ್ಯವೊ ಅದೆಲ್ಲವನ್ನೂ ಶ್ರೀಧರಸ್ವಾಮಿಗಳು ಮಾಡಿ ಮುಗಿಸಿದರು. ಗ್ರಂಥ ರಚನೆ, ಪ್ರವಚನ, ಅನುಷ್ಠಾನ, ಸಂಭಾಷಣೆ, ಸಂಘ ಸಂಸ್ಥೆಗಳ

ಸ್ಥಾಪನೆ, ಉಪದೇಶ, ದೇವಾಲಯಗಳ ಜೀರ್ಣೋದ್ಧಾರ, ಸಾಧಕರಿಗೆ ಹಿತಬೋಧನೆ – ಈ ಮಾರ್ಗಗಳೆಲ್ಲವನ್ನೂ ತಮ್ಮ ಉದ್ದೇಶಕ್ಕಾಗಿ ಬಳಸಿಕೊಂಡರು. ಕಿಕ್ಕಿರಿದು ಸೇರುತ್ತಿದ್ದ ಜನಸ್ತೋಮದಿಂದ ದೇಹವು ಬಳಲಿ ಅನಾರೋಗ್ಯವಾಗುತ್ತಿದ್ದುದೂ ಉಂಟು. ಅಂತಹ ಸಂದರ್ಭದಲ್ಲಿ ಔಷಧ ಸೇವನೆಯ ಜೊತೆಗೆ ಏಕಾಂತದಲ್ಲಿ ತಪಶ್ಚರ್ಯೆಯಲ್ಲಿ ತೊಡಗುವುದು ಅವರ ಪದ್ಧತಿಯಾಗಿತ್ತು. ಕಡೆಕಡೆಗೆ ಏಕಾಂತವಾಸವೇ ಹೆಚ್ಚು ಪ್ರಿಯವೆನಿಸಿತು. ನೇರವಾಗಿ ವರದಹಳ್ಳಿಗೆ ಬಂದು ತಮ್ಮ ಏಕಾಂತವಾಸದ ನಿಶ್ಚಯವನ್ನು ಭಕ್ತವೃಂದಕ್ಕೆ ತಿಳಿಸಿದರು. ಬೆಟ್ಟದ ಮೇಲೆ ಅವರ ತಪಶ್ಚರ್ಯೆಗಾಗಿ ಪ್ರತ್ಯೇಕವಾದ ಒಂದು ಕುಟೀರದ ನಿರ್ಮಾಣವಾಯಿತು. ಸ್ನಾನ ಮತ್ತು ಆಹ್ನಿಕಗಳಿಗಾಗಿ ಶ್ರೀಗಳವರು ಬೆಟ್ಟದ ಕೆಳಗಿರುವ ಕೊಳಕ್ಕೆ ಬರಬೇಕಾಗಿತ್ತು. ಇಳಿಯುವ ಮೆಟ್ಟಿಲುಗಳಿಗೆ ಪೂರ್ತಿಯಾಗಿ ಆವರಣವನ್ನು ಕಲ್ಪಿಸಿ ಯಾರ ದರ್ಶನಕ್ಕೂ ಅವಕಾಶವಾಗದಂತೆ ಮಾಡಲಾಯಿತು. ಆಶ್ರಮದ ಸೇವಾ ವ್ಯವಸ್ಥೆಯನ್ನು ಭಕ್ತಮಂಡಲಿಗೆ ವಹಿಸಿ ಎಲ್ಲರಿಗೂ ಹಿತವಚನಗಳನ್ನಿತ್ತು ಒಂದು ಶುಭಮುಹೂರ್ತದಲ್ಲಿ ಶ್ರೀಧರಸ್ವಾಮಿಗಳು ಏಕಾಂತದ ತಪಶ್ಚರ್ಯೆಗಾಗಿ ಕುಟೀರವನ್ನು ಪ್ರವೇಶಿಸಿದರು.

ಎಷ್ಟುಕಾಲ ಏಕಾಂತವಾಸ ಎಂಬುದು ಯಾರಿಗೂ ಗೊತ್ತಿರಲಿಲ್ಲ. “ಲೋಕಕಲ್ಯಾಣಕ್ಕಾಗಿ ತಪಸ್ಸು ಮಾಡಬೇಕೆಂದು ಭಗವಂತನ ಪ್ರೇರಣೆಯಾಗಿದೆ”. ಎಂದು ಮಾತ್ರ ಶ್ರೀಗಳವರು ತಿಳಿಸಿದ್ದರು. ಆತ್ಮೀಯರಾದ ಒಬ್ಬಿಬ್ಬ ಶಿಷ್ಯರ ಹೊರತಾಗಿ ಉಳಿದವರೊಡನೆ ಸಂಪರ್ಕವೇ ತಪ್ಪಿಹೋಯಿತು. ಶಿಷ್ಯರೊಡನೆಯೂ ಅವಶ್ಯಕತೆ ಬಂದಾಗ ಬರಿಯ ಸಂಕೇತದಿಂದ ಸೂಚನೆಯೇ ಹೊರತು ಮಾತಾಡುತ್ತಿರಲಿಲ್ಲ. ಊಟ ಮಾಡುತ್ತಿರಲಿಲ್ಲ. ತಾವೇ ಸ್ಥಾಪಿಸಿದ ಗೋಶಾಲೆಯಿಂದ ಬರುವ ಕ್ಷೀರದ ಹೊರತಾಗಿ ಇನ್ನೇನನ್ನೂ ಮುಟ್ಟುತ್ತಿರಲಿಲ್ಲವೆಂದು ತಿಳಿದು ಬರುತ್ತದೆ. ಆತ್ಮೀಯರಾದ ಭಕ್ತರು ಬಂದರೂ ದರ್ಶನವಿಲ್ಲ. ಈ

ರೀತಿಯಾಗಿ ಏಕಾಂತದಲ್ಲಿದ್ದು ಸದಾ ತಪಸ್ಸಿನಲ್ಲಿ ಮುಳುಗಿರುವುದೆಂದರೆ, ಅತ್ಯಂತ ಕಠಿಣವಾದ ವ್ರತವೇ ಸರಿ.

ಇದೇರೀತಿಯಾಗಿ ನಾಲ್ಕು ವರ್ಷಗಳು ಗತಿಸಿ ಹೋದವು. ಐದನೆಯ ವರ್ಷದಲ್ಲಿ ಕೆಲವು ತಿಂಗಳು ಸಂದವು.

ಪ್ರಮಾದೀ ನಾಮ ಸಂವತ್ಸರದ (ಕ್ರಿ.ಶ.1973) ಚೈತ್ರಮಾಸದಲ್ಲಿ ಎಂದಿನಂತೆ ಶ್ರೀರಾಮನವಮೀ ಪ್ರಯುಕ್ತ ಒಂಬತ್ತು ದಿನಗಳ ಉತ್ಸವ ವೈಭವದಿಂದ ನಡೆಯಿತು. ದಶಮಿಯ ದಿನ ಶ್ರೀಧರಸ್ವಾಮಿಗಳು ಏಕಾಂತವಾಸದಲ್ಲಿಯೇ ಧ್ವನಿವರ್ಧಕದ ಮೂಲಕ ಪ್ರವಚನ ಮಾಡುವರೆಂಬ ಸುದ್ದಿ ಇತ್ತು. ಸಾವಿರಗಟ್ಟಲೆ ಗುಂಪುಗುಂಪಾಗಿಜನರು ನೆರೆದಿದ್ದರು. ಸ್ವಾಮಿಗಳ ಅಮೃತವಾಣಿಯನ್ನಾದರೂ ಕಿವಿಯಿಂದ ಕೇಳಬಹುದೆಂಬುದು ಜನರ ಅಭಿಲಾಷೆ. ಶ್ರೀಗಳವರಿಗೆ ಆರೋಗ್ಯವಿಲ್ಲವೆಂದೂ ಪ್ರವಚನ ನಡೆಯುವುದಿಲ್ಲವೆಂದೂ ಗೊತ್ತಾಗಿ ಎಲ್ಲರಿಗೂ ನಿರಾಶೆಯಾಯಿತು. ಶ್ರೀಧರಸ್ವಾಮಿಗಳ ದೇಹಸ್ಥಿತಿಯ ವಿಷಯವಾಗಿ ಹೊರಗಿನ ಜನರಿಗೆ ಮೊದಲು ಗೊತ್ತಾದದ್ದು ಆಗಲೇ. ಭಕ್ತಜನರಿಗೆ ಕಳವಳ ಹೆಚ್ಚಿತು. ಶ್ರೀಗಳವರ ದೇಹಸ್ಥಿತಿ ಹೇಗಿದೆಯೆಂದು ತಿಳಿಯುವ ತವಕ ಅಧಿಕವಾಯಿತು. ಅನಾರೋಗ್ಯವೆಂದರೆ ಏನಾಗಿದೆ? ಯಾವ ಚಿಕಿತ್ಸೆ ನಡೆಯುತ್ತಿದೆ? ಎಂಬ ಪ್ರಶ್ನೆಗೆ ಯಾರಿಂದಲೂ ಉತ್ತರವಿಲ್ಲ. ಏಕಾಂತವಾಸಕ್ಕೆ ಭಂಗವಾಗುವುದರಿಂದ ಬೆಟ್ಟದ ಮೇಲೆ ಯಾರೂ ಬರಕೂಡದೆಂದು ಕಟ್ಟಾಜ್ಞೆ ಇತ್ತು. ಸ್ವಾಮಿಗಳವರ ಅನಾರೋಗ್ಯಸ್ಥಿತಿಯಲ್ಲಿ ಈ ಆಜ್ಞೆಯನ್ನು ಯಾರು ಹೊರಡಿಸಿದರೆಂಬುದು ಯಾರಿಗೂ ತಿಳಿಯಲಿಲ್ಲ.

ದೇಹಸ್ಥಿತಿ ಇನ್ನೂ ಹದಗೆಡುತ್ತಿದೆಯೆಂಬ ಗಾಳಿಸುದ್ದಿ ದಿನವೂ ಪ್ರಸಾರವಾಗುತ್ತಿತ್ತು. ಚೈತ್ರ ಬಹುಳ ಬಿದಿಗೆ ಗುರುವಾರ ತಾ. 19.4.1973ರಂದು ಬೆಳಗಾಯಿತು. ಆಶ್ರಮದ ಯಾರ

ಮುಖದಲ್ಲಿಯೂ ಕಳೆಯಿಲ್ಲ. ಯಾವುದೋ ಕಪ್ಪು ನೆರಳು ತಮ್ಮನ್ನು ಆವರಿಸುತ್ತಿದೆಯೆಂದು ಜನರ ಮನಸ್ಸಿಗೆ ತೋರುತ್ತಿತ್ತು. ಪ್ರಾತಃಕಾಲ 9 ಗಂಟೆಯ ಹೊತ್ತಿಗೆ ಭಗವಾನ್ ಶ್ರೀಧರಸ್ವಾಮಿಗಳು ಪಾರ್ಥಿವ ದೇಹವನ್ನು ತ್ಯಜಿಸಿದರೆಂಬ ಸುದ್ದಿ ಮುಟ್ಟಿತು. ಶ್ರೀಧರಸ್ವಾಮಿಗಳು ಪರಮಾತ್ಮನಲ್ಲಿ ಸೇರಿಹೋದರು.

ಕರ್ನಾಟಕ ಮತ್ತು ಮಹಾರಾಷ್ಟ್ರಗಳ ಆಕಾಶವಾಣಿ ಕೇಂದ್ರಗಳಿಂದ ಸುದ್ದಿ ಪ್ರಸಾರವಾಯಿತು. ಸಮುದ್ರದ ಅಲೆಗಳಂತೆ ಜನಸ್ತೋಮ ವರದಹಳ್ಳಿಗೆ ಹೋಗಿ ಶ್ರೀಧರಸ್ವಾಮಿಗಳ ಅಂತ್ಯದರ್ಶನವನ್ನು ಪಡೆಯಿತು. ಅನಂತರ ಶಾಸ್ತ್ರೋಕ್ತ ವಿಧಿಯಂತೆ ಶ್ರೀಗಳವರ ಪಾರ್ಥಿವ ದೇಹವನ್ನು ಸಮಾಧಿ ಮಾಡಲಾಯಿತು.

ಆವಿರ್ಭಾವ : **07–12–1908**
ತಿರೋಧಾನ : **19–04–1973**



# ಗ್ರಂಥೋಪಸಂಹಾರ

ಶ್ರೀಧರಸ್ವಾಮಿಗಳವರ ಜೀವನ ಚರಿತ್ರೆಯನ್ನು ಬಾಲ್ಯದಿಂದ ಅಂತ್ಯದವರೆಗೆ ಸಂಕ್ಷೇಪವಾಗಿ ತಿಳಿಸಿದ್ದಾಯಿತು. ಅನಾಥನಾಗಿ ದಿಕ್ಕಿಲ್ಲದ ಒಬ್ಬ ಬಾಲಕನು ತನ್ನ ಹಠದಿಂದ, ಛಲದಿಂದ, ಮಹತ್ತರವಾದ ಸಾಧನೆಯಿಂದ ಇಷ್ಟು ಕೀರ್ತಿಶಾಲಿಯಾಗಿ ಬಾಳಿದುದು ಒಂದು ಅಚ್ಚರಿ. ಪ್ರತ್ಯಕ್ಷವಾಗಿ ನಾವು ಕಂಡದ್ದರಿಂದ ಇದನ್ನು ನಾವು ನಂಬಬೇಕಾಗಿದೆ. ಮನುಷ್ಯನ ಪ್ರಯತ್ನಕ್ಕೆ ಅಸಾಧ್ಯವಾದದ್ದು ಯಾವುದು ಇಲ್ಲ ಎಂಬುದಕ್ಕೆ ಇದು ಉದಾಹರಣೆ. ಕನ್ನಡನಾಡಿನಲ್ಲಿಯೂ, ಮಹಾರಾಷ್ಟ್ರದಲ್ಲಿಯೂ ಶ್ರೀಧರಸ್ವಾಮಿಗಳ ಭಕ್ತರು ಬಹುಮಂದಿ ಇದ್ದಾರೆ. ಸ್ವಾಮಿಗಳ ಉಪದೇಶ ಪಡೆಯಲು ಜರ್ಮನಿಯಿಂದಲೂ ವಿದ್ವಾಂಸರು ಆಗಮಿಸಿ ಆಶ್ರಮದಲ್ಲಿ ನೆಲೆಸಿದ್ದುಂಟು. ಜರ್ಮನಿಯಲ್ಲಿ ಶ್ರೀ ಶ್ರೀಧರಸ್ವಾಮಿಗಳ ಆಶ್ರಮವೊಂದಿದೆಯಂತೆ. ಅವರು ಶ್ರೀದತ್ತಾತ್ರೇಯನ ಅವತಾರವೆಂದೂ, ಅಂಜನೇಯನ ಅವತಾರವೆಂದೂ ಭಕ್ತರು ನಂಬಿದ್ದಾರೆ. ಅವರ ಮಾತು ಸತ್ಯವಾದದ್ದನ್ನು,ಅವರಿಂದ ಹಲವಾರು ಪವಾಡಗಳು ನಡೆದುಹೋದದ್ದನ್ನು ಜನರು ಕಂಡಿದ್ದಾರೆ. ಅದು ಹೇಗಾದರೂ ಇರಲಿ, ಶ್ರೀಧರಸ್ವಾಮಿಗಳು ಸನಾತನ ಧರ್ಮದ ವಿಷಯದಲ್ಲಿ ತುಂಬ ಕಳಕಳಿಯನ್ನು ಹೊಂದಿ ಧರ್ಮರಕ್ಷಣೆಗಾಗಿ ತಮ್ಮ ಜೀವಿತವನ್ನೇ ತೇಯ್ದರೆಂಬುದು ಸತ್ಯಸಂಗತಿ. ಎಲ್ಲಿಯೂ ಕಾಣಸಿಗದಿರುವ ಶಾಂತಮೂರ್ತಿಯಾಗಿ ಬಡವರನ್ನು-ಬಲ್ಲಿದರನ್ನು, ಸ್ತ್ರಿಯರನ್ನು-ಪುರುಷರನ್ನು, ದೊಡ್ಡವರನ್ನು-ಮಕ್ಕಳನ್ನು ಸಮದೃಷ್ಟಿಯಿಂದ ಕಂಡು ಎಲ್ಲರ ಹಿತಕ್ಕಾಗಿ ಶ್ರಮಿಸಿದರೆಂಬುದೂ ಸತ್ಯಸಂಗತಿ. ಮನುಷ್ಯ ರೂಪವನ್ನೇ ಧರಿಸಿದ ತಪಸ್ಸಿನ ಮೂರ್ತಿಯೆಂಬಂತೆ ವಿರಾಜಿಸಿದರು. ಕರ್ಮ, ಭಕ್ತಿ, ಜ್ಞಾನ – ಇವುಗಳ ಸಂಗಮ ಸ್ಥಳವಾಗಿದ್ದರು. ಇಂತಹ ಪುಣ್ಯ ಪುರುಷರು ಈಗ ಇಲ್ಲಿ ಹುಟ್ಟಿದರೆಂಬುದೇ ಭಾರತದೇಶವು ಸದಾ ಪುಣ್ಯಭೂಮಿಯೆಂಬುದಕ್ಕೆ ಸಾಕ್ಷಿ.

ಈಗಲೂ ವರದಹಳ್ಳಿ ಒಂದು ಯಾತ್ರಾಸ್ಥಳವಾಗಿದೆ. ಶ್ರೀಧರಸ್ವಾಮಿಗಳು ಗೊತ್ತು ಮಾಡಿದ ಉತ್ಸವಾದಿಗಳು ವೈಭವದಿಂದ ನಡೆಯುತ್ತವೆ. ಬಾಲ್ಯದಿಂದಲೂ ಸೇವೆಯನ್ನು ಮಾಡುತ್ತ ಶ್ರೀಧರಸ್ವಾಮಿಗಳ ಅನುಗ್ರಹಕ್ಕೆ ಪಾತ್ರರಾದ ಅವರ ಪ್ರಿಯ ಶಿಷ್ಯರುಗಳ ನೇತೃತ್ವದಲ್ಲಿ ಧರ್ಮಜಾಗೃತಿಯ ಕಾರ್ಯ ಮುಂದುವರೆಯುತ್ತಿದೆ.





## ಗುರುವಾಣಿ

**ಶು**ದ್ಧ ಸ್ವರೂಪದ ಸತ್ಯಸ್ಥಿತಿಯನ್ನು ಮನಸ್ಸಿನಲ್ಲಿಟ್ಟು ವಿಶ್ವಹಿತದ ಉಚ್ಚದೃಷ್ಟಿಯನ್ನುಳಿಸಿ ಸಮಯೋಚಿತ ಕಾರ್ಯಗಳನ್ನು ಲೋಕಕ್ಕೆ ಅನುಕರಣೀಯವಾಗುವಂತೆ, ಪುರುಷಪ್ರಯತ್ನದ ಪರಾಕಾಷ್ಠೆಯ ಉಚ್ಚ ಆದರ್ಶವಾಗುವಂತೆ ಮಾಡುತ್ತ ಹೋಗಿ, ತನ್ನ ಪರಿಶುದ್ಧ ಕೀರ್ತಿಯನ್ನು ಕೈಕಂಬದಂತೆ ಜಗತ್ತಿನಲ್ಲಿಡುವುದು ಮೊದಲಿನಿಂದಲೂ ಬಂದ ನಮ್ಮ ಜ್ಞಾನಿಗಳ ಶಿಷ್ಟಾಚಾರವು.



# ಶ್ರೀ ಶ್ರೀಧರ ಸ್ವಾಮಿಗಳವರಿಗೆ ಅರ್ಪಿತವಾದ ಸ್ತುತಿಪುಷ್ಪಮಾಲಾ

ನಮೋಸ್ತು ಯತಿರಾಜಾಯ ಪ್ರಣವಾರ್ಥ ಸ್ವರೂಪಿಣೇ।
ಶ್ರೀಧರಸ್ವಾಮಿನೇ ತುಭ್ಯಂ ವರದಾಪುರವಾಸಿನೇ ॥ 1
ಲೋಕವಂದಿತಪಾದಾಯ ಶ್ರೀಕರೇಕ್ಷಣಶೋಭಿನೇ ।
ಶೋಕತಾಪಾಪಹಾರಾಯ ಶ್ರೀಧರಾಯ ನಮೋ ನಮಃ ॥ 2
ಚಿದಂಬರವಿಹಾರಾಯ ಕಾಷಾಯಾಂಬರಧಾರಿಣೇ।
ಶ್ರೀದತ್ತಪ್ರತಿಬಿಂಬಾಯ ಶ್ರೀಧರಾಯ ನಮೋ ನಮಃ ॥ 3
ನಿಸ್ಸಂಗಾಯ ನಿರೀಹಾಯ ನಿರ್ಮಮಾಯ ಯತಾತ್ಮನೇ ।
ಮಾಯಾತೀತಾಯ ಮುನಯೇ ಪರಿಪೂರ್ಣಾಯ ತೇ ನಮಃ॥ 4
ಸನಾತನಪಥಸ್ಥಾಯ ಸ್ವಾತ್ಮಾರಾಮಾಯ ತೇ ನಮಃ ।
ವಿಷಯೇಭ್ಯೋ ನಿವೃತ್ತಾಯ ಪ್ರಶಾಂತ ಮನಸೇ ನಮಃ ॥ 5
ತ್ಯಾಗಿನೇ ಯೋಗಿನೇ ನಿತ್ಯಂ ನಿರ್ವಾಣಸುಖಭೋಗಿನೇ ।
ರಾಗಿಣೇ ಲೋಕಕಲ್ಯಾಣೇ ಯಮಿನೇ ಶಮಿನೇ ನಮಃ ॥ 6
ಧರ್ಮಸಂಸ್ಥಾಪನಾರ್ಥಾಯ ಧರ್ಮಧ್ವಜವಿರಾಜಿನೇ ।
ಕರ್ಮಬಂಧವಿಮುಕ್ತಾಯ ಶ್ರೀಧರಾಯ ನಮೋ ನಮಃ ॥ 7
ನಿಗೃಹೀತಾಕ್ಷವೃಂದಾಯ ಸುಗೃಹೀತಾಕ್ಷಮಾಲಿನೇ ।
ಹಸ್ತೋಪಹೃತಭಿಕ್ಷಾಯ ದಕ್ಷಾಯ ಗುರವೇ ನಮಃ ॥ 8
ಕಷ್ಟಾನಾಂ ದಮನಾಯಾಸ್ತು ಶಿಷ್ಟಾನಾಂ ಕಾಮಧೇನವೇ ।
ಭವತಾಪವಿಶಿಷ್ಟಾನಾಂ ನಮಸ್ತೇ ಶಿಶಿರಾಂಶವೇ ॥ 9
ಅಜ್ಞಾನತಿಮಿರಾಂಧಾನಾಂ ವಿಜ್ಞಾನಜ್ಯೋತಿಷೇ ನಮಃ ।
ಪ್ರಜ್ಞಾನಾಮೃತತೃಪ್ತಾಯ ಪ್ರಕೃಷ್ಟಮಹಸೇ ನಮಃ ॥ 10
ಪದಶ್ರೀ ಶೋಭಿತಾಯಾಸ್ತು ವಾಕ್ಯಶ್ರೀದತ್ತಸಂಪದೇ ।
ಮೋಕ್ಷಶ್ರೀಧಾರಿಣೇ ನಿತ್ಯಂ ಶ್ರೀಧರಾಯ ಪುನರ್ನಮಃ ॥ 11
ವಿದ್ವಜ್ಜನಶರಣ್ಯಾಯ ಸಜ್ಜನಾಭಯದಾಯಿನೇ ।
ಮಜ್ಜತಾಂ ಮೃತ್ಯುಪಾಥೋಘೌ ಕರ್ಣಧಾರಾಯ ತೇ ನಮಃ ॥ 12

ಭಸ್ಮೀಕೃತಮನೋಜಾಯ ಭಸ್ಮರುದ್ರಾಕ್ಷಭೂಷಿಣೇ ।
ನಿಶ್ಶೇಷೀಕೃತಮೋಹಾಯ ಕಸ್ಮೈಚಿದ್ ಗುರವೇ ನಮಃ ॥ 13
ಜ್ಞಾನಮುದ್ರಾಧರಾಯಾಸ್ತು ಯೋಗಸಾಕ್ಷಾತ್ಕೃತಾತ್ಮನೇ ।
ಭೋಗರಾಗವಿದೂರಾಯ ಶ್ರೀಧರಾಯ ಪುನರ್ನಮಃ ॥ 14
ವೇದಶಾಸ್ತ್ರಾನುರೋಧೇನ ಸಾಧುಮಾರ್ಗೋಪದೇಶಿನೇ ।
ವಾದಕೌತುದೂರಾಯ ಶ್ರೀಧರಾಯ ನಮೋ ನಮಃ ॥ 15
ಕಾರುಣ್ಯಪೂರ್ಣನೇತ್ರಾಯ ಸ್ಮೇರವಕ್ತ್ರಾಂಬುಜನ್ಮನೇ ।
ಭಕ್ತಾನಾಂ ಭಾಗ್ಯದಾಯಾಸ್ತು ಶ್ರೀಧರಸ್ವಾಮಿನೇ ನಮಃ ॥ 16
ಸ್ಮಿತ ಚಂದ್ರಿಕಯಾಚ್ಛಿನ್ನ ವ್ಯಾಮೋಹತಮಸೇ ನಮಃ ।
ಧೃತಮಾನವರೂಪಾಯ ದತ್ತಾಯ ಗುರವೇ ನಮಃ ॥ 17
ಶ್ರೀಸಮರ್ಥಗುರೋ:ಸಾಕ್ಷಾತ್ ಸಂಪ್ರಾಪ್ತಜ್ಞಾನಭಾನವೇ ।
ಶ್ರೀ ಸಜ್ಜನಗಡಕ್ಷೇತ್ರ ತಪಃ ಸಿದ್ಧಾಯ ತೇ ನಮಃ ॥ 18
ನಾರಾಯಣಾತ್ಮಜಾಯಾಸ್ತು ನಮೋ ನಾರಾಯಣಾತ್ಮನೇ ।
ಕಮಲಾತನಯಾಯಾಸ್ತು ನಮೋ ವಿಮಲಚೇತಸೇ ॥ 19
ನಮಃ ಸಂಸಾರಕಾಂತಾರಸಂಚಾರಕ್ಲಾಂತಬಂಧವೇ ।
ಜನ್ಮಮೃತ್ಯುಜರಾಗ್ರಾಹನಿಗ್ರಹವ್ಯಗ್ರಕರ್ಮಣೇ ॥ 20
ಪ್ರಸನ್ನವದನಾಯಾಸ್ತು ವಿಪನ್ನಾರ್ತಿಪ್ರಮಾಥಿನೇ ।
ಪ್ರಸನ್ನ ಕಲ್ಪವೃಕ್ಷಾಯ ಶ್ರೀಧರಸ್ವಾಮಿನೇ ನಮಃ ॥ 21
ಸಮಾಯ ಸರ್ವಭೂತೇಷು ಕ್ಷಮಾಯಾ ನಿಧಯೇ ನಮಃ ।
ಸಮಾಹಿತಾತ್ಮನೇ ತುಭ್ಯಂ ಶ್ರೀಧರಸ್ವಾಮಿನೇ ನಮಃ ॥ 22
ಸಂತತಪ್ರಣವಧ್ಯಾನಸ್ನಾನಶುದ್ಧಾತ್ಮನೇ ನಮಃ ।
ರಾಮನಾಮಸುಧಾಪುಣ್ಯಪಾನತುಷ್ಟಾತ್ಮನೇ ನಮಃ ॥ 23
ಅದ್ವಯಾತ್ಮ ಪ್ರಬುದ್ಧಾಯ ವರದಾದ್ರಿವಿಹಾರಿಣೇ ।
ಶುದ್ಧಾಯ ಸಿದ್ಧಿದಾಯಾಸ್ತು ಶ್ರೀಧರಾಯ ನಮೋ ನಮಃ ॥ 24
ನಿಖಿಲ ಹೃದಯಾವಾಸಂ ಮೋಕ್ಷಲಕ್ಷ್ಮೀನಿವಾಸಂ ।
ಶುಭಚರಿತವಿಲಾಸಂ ಮಾನವಾಕಾರಭಾಸಂ ।
ಗುರುಮವಿರತಮಂತಶ್ಚಿಂತಯನ್ ಸನ್ತಿತೀರ್ಷುಃ
ಕಲಯತು ಚಿರಮೇತಾಂ ವಾಂಙ್ಮಯೀಂ ಪುಷ್ಪಮಾಲಾಂ ॥ 25

–ವಿದ್ವಾನ್ ಎನ್. ರಂಗನಾಥ ಶರ್ಮಾ

# ಶ್ರೀಧರಸ್ವಾಮಿಗಳಿಂದ ರಚಿತವಾದ ಗ್ರಂಥಗಳು

## ಮರಾಠಿ

1. ಶ್ರೀಸಮರ್ಥಾವತಾರ ಸ್ತೋತ್ರ
2. ಶ್ರೀ ರಾಮ ಗೌರವ
3. ಶ್ರೀ ರಾಮ ಭಕ್ತಿಸಾರ
4. ಪ್ರಾತಃಸ್ಮರಣೆ
5. ನಿತ್ಯಪಾಠ ರಾಮಾಯಣ
6. ಶ್ರೀರಾಮಪಾಠ
7. ಶ್ರೀ ಸಮರ್ಥಪಾಠ
8. ಪಂಚೀಕರಣ
9. ಸ್ವಾತ್ಮನಿರೂಪಣ ಮತ್ತು ಮುನಿ–ವಿಷಯ ಸಂವಾದ.

## ಸಂಸ್ಕೃತ

10. ಶ್ರೀಶಿವಗುರುಸ್ತೋತ್ರ
11. ಶ್ರೀಸಮರ್ಥ ಪಂಚರತ್ನ
12. ಸೋಮೇಶ್ವರ ಪಂಚಮುಖ ಸ್ತೋತ್ರ
13. ಸರಸ್ವತೀ ಸ್ತೋತ್ರ
14. ಪರಿವ್ರಾಟ್ ಹೃದಯ
15. ಸ್ವಾನುಭವಾಮೃತ
16. ಶ್ರೀ ದತ್ತಾಷ್ಟಕ
17. ಶ್ರೀ ದತ್ತಸ್ತವರಾಜ
18. ಮಾರುತಿ ಸ್ತೋತ್ರ
19. ರಾಮೇಶ್ವರ ಸ್ತೋತ್ರ
20. ಶ್ರೀಶಂಕರಾಚಾರ್ಯಸ್ತುತಿ
21. ಶ್ರೀರಾಮಸ್ತವ
22. ಶಿವಕಾಂತಿ ತಿಲಕ (172ಶ್ಲೋಕಗಳು)
23. ಶ್ರೀರಾಮ ಮಂತ್ರ ರಾಜಸ್ತುತಿ
24. ವಿಶ್ವಧರ್ಮಾಭ್ಯದಯ (ಐದು ಭಾಷೆಗಳಲ್ಲಿ)
25. ಶ್ರೀರಾಮ ರಕ್ಷಾ ಸ್ತೋತ್ರ
26. ಕರುಣಾಷ್ಟಕ
27. ಆನಂದತತ್ತ್ವಮೀಮಾಂಸಾ (ಹಿಂದಿ)
28. ಹನುಮತ್ ಸ್ತೋತ್ರ
29. ನರಸಿಂಹ ಸ್ತೋತ್ರ
30. ಆತ್ಮದರ್ಶಕ
31. ಜಗದಂಬಾ ಸ್ತೋತ್ರ
32. ಧೇನು ಸ್ತೋತ್ರ
33. ದತ್ತ ಕರುಣಾರ್ಣವ

34. ಪರಿವ್ರಾಟ್ ಮನನ

35. ಮುಮುಕ್ಷುಧಾಮ

36. ಆರ್ಯ ಸಂಸ್ಕೃತಿ (ಹಿಂದಿ ಮತ್ತು ಕನ್ನಡ)

37. ದಿವ್ಯಸಂದೇಶ(ಹಿಂದಿ)

38. High-Lights of Aryan Culture (English)

ಇತ್ಯಾದಿ, ಅಲ್ಲದೆ ಹಲವಾರುಉಪನ್ಯಾಸಗಳೂ ಕನ್ನಡದಲ್ಲಿ ಪ್ರಕಟವಾಗಿವೆ.

## ಆಧಾರ ಗ್ರಂಥಗಳು

1. ವರದಪುರದ ಮಹಾಯೋಗಿ – ಶ್ರೀ ರಾಘವದಾಸ, ಸಜ್ಜನಗಡ
2. ಶ್ರೀ ಶ್ರೀಧರಸ್ವಾಮಿಗಳು – ವರದಹಳ್ಳಿ ಆಶ್ರಮದ ಪ್ರಕಟಣೆ

ಇತ್ಯಾದಿ ಗ್ರಂಥಗಳು ಮತ್ತು ಲೇಖಕನ ಪ್ರತ್ಯಕ್ಷ ದರ್ಶನ.



# ಗುರುವಾಣಿ

**ನ**ನ್ನನ್ನು ದೇಹಾಕಾರದಿಂದ ನೋಡಬೇಡಿರಿ. ನಿಮ್ಮ ಆನಂದ ಸ್ವರೂಪವೇ ನಾನೆಂದುತಿಳಿದು ನನ್ನನ್ನು ಕಾಣುತ್ತಿರುವಾಗ ನಿಮ್ಮ ದೇಹದ ಭಾವನೆಯನ್ನೂ ಸಹ ಮರೆತುಬಿಡಿ. ತರಂಗವು ಸಮುದ್ರದಲ್ಲಿ ಸೇರಿ ಅನಂತವಾದ ಸಮುದ್ರವೇ ಆಗುವಂತೆ ನಿಮ್ಮ ನಾನೆಂಬ ಅರಿವೂ ಸಹ ಕಳೆದು ಒಂದು ಅಪಾರ ಆನಂದವಾಗಿಯೇ ಉಳಿಯಿರಿ. ಇದು ತ್ರಿಕಾಲಾಬಾಧಿತ ಸತ್ಯಸ್ಥಿತಿಯು. ಅಂತಹ ಸ್ಥಿತಿಯು ನಿಮಗೆಲ್ಲರಿಗೂ ಉಂಟಾಗಲಿ

* * * * *

**ವಿ**ಷವನ್ನು ಶುದ್ಧೀಕರಿಸಿ ರೋಗನಿವೃತ್ತಿಯ ಔಷಧವೆಂದು ಉಪಯೋಗಿಸುವಂತೆ ವಿಷಯಗಳನ್ನು ಸತ್ಕರ್ಮ-ಸದುಪಾಸನೆ-ಸದ್ವಿವೇಕಗಳಿಂದ ಶುದ್ಧೀಕರಿಸಿ, ವಿಷಯ ವ್ಯಾಮೋಹ ರೂಪವಾದ ಭವರೋಗ ನಿವೃತ್ತಿಯ ಔಷಧವೆಂದು ಸಾವಧಾನತೆಯಿಂದ ಆಯಾ ಆಶ್ರಮಧರ್ಮವೆಂದು ಅತ್ಯಲ್ಪವಾಗಿ ಉಪಯೋಗಿಸಿದರೆ ನೀವು ಕ್ರಮೇಣ ನಿರ್ವಿಷಯ ಆತ್ಮಸುಖವನ್ನು ಪಡೆಯಲು ಪಾತ್ರರಾಗುವಿರಿ.

* * * * *

**ಪಾ**ತ್ರೆ ತುಂಬ ಇರುವ ಹಾಲಿನಪಾಯಸದಲ್ಲಿ ಚಿಮಣಿಎಣ್ಣೆಯ ಒಂದು ಬಿಂದು ಬಿದ್ದಹಾಗೆ, ಸಾಧಕನಲ್ಲಿ ಒಂದಿಷ್ಟು 'ಅಹಂ' ಬಂದುಬಿಟ್ಟರೆ ಮಾಡಿದ್ದೆಲ್ಲಾ ತಿಪ್ಪೆಗುಂಡಿಪಾಲು ಆಗಲಿಕ್ಕೆ ಏನೂ ಅಡ್ಡಿ ಇಲ್ಲ.

* * * * *

**ನಿ**ಷ್ಕಪಟಪ್ರೀತಿ ಮತ್ತು ಮೃದುಮಧುರ ನಡೆ-ನುಡಿ ಇವು ಜಗದ್ವಶೀಕರಣದ ಮಹಾಮಂತ್ರಗಳಾಗಿರುವುವು.



# ಸದ್ಗುರು ಶ್ರೀ ಶ್ರೀಧರ ಸ್ತುತಿ

ಆದಿನಾರಾಯಣಂವಿಷ್ಣುಂ ಬ್ರಹ್ಮಾಣಂಚ ವಸಿಷ್ಠಕಂ ।
ಶ್ರೀರಾಮಂಮಾರುತಿಂವಂದೇ ರಾಮದಾಸಂಚಶ್ರೀಧರಂ ॥

ನಮಃಶಾಂತಾಯ ದಿವ್ಯಾಯ ಸತ್ಯಧರ್ಮಸ್ವರೂಪಿಣೇ ॥
ಸ್ವಾನಂದಾಮೃತತೃಪ್ತಾಯ ಶ್ರೀಧರಾಯನಮೋನಮಃ ॥

ಶ್ರೀಧರಂಪರಮಾನಂದಂ ಲೋಕಾನುಗ್ರಹಕಾರಕಂ ॥
ಭಕ್ತಹೃತ್ಪದ್ಮಖಮಣಿಂ ಗುರುರಾಜಂನಮಾಮ್ಯಹಂ ॥

ವಂದಾರುಜನಮಂದಾರಂ ಯತಿವೃಂದಶಿಖಾಮಣಿಂ ।
ಬ್ರಹ್ಮವಿಷ್ಣುಶಿವಾಭಿನ್ನಂ ಗುರುರಾಜಂನಮಾಮ್ಯಹಂ ॥

ವರ್ತಮಾನಾಘವಿಧ್ವಂಸಕಾರಿಣಂ ಭಾವಿಪುಣ್ಯದಂ ।
ಪೂರ್ವಪುಣ್ಯಫಲಾದ್ದೃಷ್ಟಂ ಗುರುರಾಜಂನಮಾಮ್ಯಹಂ ॥

ಸಚ್ಚಿದಾನಂದದುಗ್ಧಾಬ್ಧಿಂ ನಿಜಸತ್ಯಹಿತೋಕ್ತಿಭಿಃ ॥
ಲೋಪಯಂತಂಹೃದಜ್ಞಾನಂ ಗುರುರಾಜಂನಮಾಮ್ಯಹಂ ॥

ಭೋಗುರೋ ಮನ್ಮನೋಭೃಂಗಃ ತ್ವತ್ಪದಾಬ್ಜೇನಿಲೀಯತೇ ।
ತ್ವದುಕ್ತಿಮಕರಂದೇನ ಪೋಷಯಶ್ರೀಧರಪ್ರಭೋ ॥

